# ರಾಷ್ಟ್ರೀಯ ವ್ಯೆಯಕ್ತಿಕ ಲಕ್ಷ್ಯ... ದೃಷ್ಟಿಕೋಣ..









ಅದುವೆ ಸೌತ್ ಇಂಡಿಯನ್ ಬ್ಯಾಂಕ್

ನಿಮ್ಮ ಕನಸುಗಳನ್ನು. ನಿಮ್ಮ ಆಸೆ ಆಕಾಂಕ್ಷೆಗಳನ್ನು ಈಡೇರಿಸಿಕೊಳ್ಳುವಲ್ಲಿ ನಿಮಗೆ ನೆರವಾಗುತ್ತಿದೆ. ನಿಮ್ಮ ಸಮಸ್ಯೆಗಳನ್ನು....ವೃದ್ಧಾಪ್ಯ. ಮಕ್ಕಳ ಉನ್ನತ ಶಿಕ್ಷಣ. ಮಗಳ ಮದುವೆ. ಸ್ವಂತ ಉದ್ಯಮ. ವಿದೇಶಿ ವಿನಿಮಯದ ಲೆಕ್ಕಪತ್ರ. ಕೃಷಿ ಮತ್ತು ಕೈಗಾರಿಕಾ ಅಭಿವೃದ್ಧಿ....ಇವೇ ಮುಂತಾದವುಗಳನ್ನು ಪರಿಹರಿಸಿಕೊಳ್ಳುವಲ್ಲಿ ನಿಮಗೆ ನೆರವಾಗುತ್ತಿದೆ. ಸೌತ್ ಇಂಡಿಯನ್ ಬ್ಯಾಂಕ್. ನಿಮ್ಮ ಪ್ರತಿಯೊಂದು ಅಗತ್ಯಕ್ಕೆ ಅನುರೂಪವಾದ ಯೋಜನೆ ಹೊಂದಿದೆ. ಭಾರತದಲ್ಲಿರುವ ಸೌತ್ ಇಂಡಿಯನ್ ಬ್ಯಾಂಕ್‌ನ ಯಾವುದೇ ಶಾಖೆಯಲ್ಲಾದರೂ ಕಾಲಿಡಿ—ಸ್ನೇಹಪೂರ್ಣವಾದ ಮತ್ತು ವೈಯಕ್ತಿಕವಾದ ಸೇವೆಯ ಸೌಲಭ್ಯ ಪಡೆಯಿರಿ.

ಒಮ್ಮೆ ಸೌತ್ ಇಂಡಿಯನ್ ಬ್ಯಾಂಕ್‌ನ ಗಿರಾಕಿ ಆದವರು. ಸದಾ ಸೌತ್ ಇಂಡಿಯನ್ ಬ್ಯಾಂಕ್‌ನ ಗಿರಾಕಿಯಾಗಿ ಉಳಿಯುವರು. ಸ್ವಸಂತೋಷದಿಂದ. ಸ್ವಂತ ಇಚ್ಛೆಯಿಂದ.



**ದಿ ಸೌತ್ ಇಂಡಿಯನ್ ಬ್ಯಾಂಕ್ ಲಿ.**

ರಿಜಿಸ್ಟರ್ಡ್ ಆಫೀಸ್: ತಿರುಚ್ಚೂರ್, ಕೇರಳ.

FDS/SIB/282/KAN

**ಎಲ್ಲೆಲ್ಲೂ ನಿಮಗೆ ಸೇವೆಸಲ್ಲಿಸಲು ಬೆಳೆಯುತ್ತಿರುವ ಬ್ಯಾಂಕ್**

# ಕಸ್ತೂರಿ

ಕನ್ನಡ ಡೈಜೆಸ್ಟ್



ಸಹಾಯಕ ಸಂಪಾದಕ :
ಮಾಧವ ನಾ. ಮಹಿಷಿ

ಕಲೆ :
ಕೆ. ಬಿ. ಕುಲಕರ್ಣಿ

ಮುಖಪುಟ :
ಕರುಣಾಳು ಬೆಳಕೆ...

ಚಿತ್ರ :
ದೇಬಜಾನಿ ಬ್ಯಾನರ್ಜಿ

ಜನವರಿ ೧೯೮೨ರಿಂದ ಜಾರಿಯಲ್ಲಿ ಬಂದಿರುವ ಚಂದಾ ದರಗಳು :

| | | |
|---|---|---|
| ಬಿಡಿ ಸಂಚಿಕೆ | ... | ೨-೫೦ |
| ೧ ವರ್ಷಕ್ಕೆ | ಅಂಚೆ ಸೇರಿ | ೨೮-೦೦ |
| ೨ ವರ್ಷಕ್ಕೆ | ,, | ೫೫-೦೦ |
| ೩ ವರ್ಷಕ್ಕೆ | ,, | ೮೨-೦೦ |

**KASTURI July 1982**

## ಬೆಳಕಿಂಡಿ

ಗೋರಿಯ ದಾರಿಗೆಂದು ನಾನು ಕೆಲವೊಂದು ಹಾಸ್ಯ ಚಟಾಕಿಗಳನ್ನು ಸಂಗ್ರಹಿಸಿಟ್ಟುಕೊಂಡಿದ್ದೇನೆ.

—ಫಿಲ್ ಕ್ಯಾಸೇ

•

ಒಬ್ಬನ ಬಗೆಗೆ ಯೋಚಿಸದೆ ಇರುವುದರಲ್ಲೂ ಆತನನ್ನು ಮರೆಯುವುದರಲ್ಲೂ ಖಂಡಿತವಾಗಿಯೂ ಅಂತರವುಂಟು.

—ವರ್ನರ್ ಕ್ರಿಸ್

•

ಮಾತು ವಿಚಾರದ ಭಾಷೆ; ಕಲೆ ಅಂತಃಕರಣದ ಭಾಷೆ ಮತ್ತು ಆಚಾರವು ಜೀವನದ ಭಾಷೆಯಾಗಿರುತ್ತದೆ.

—ಕಾಕಾ ಕಾಲೇಲಕರ

•

'ರೋಮಿನಲ್ಲಿದ್ದಾಗ ರೋಮನ್ನನಾಗಿರು' ಎಂಬುದನ್ನು ಒಪ್ಪುವ ನಾವು, ಆ ಮಾತನ್ನು ಇತರ ದೇಶಭಾಷೆಗಳ ವಿಷಯದಲ್ಲಿ ಒಪ್ಪುವುದಿಲ್ಲವೇಕೆ?

✡

### ಚಂದಾದಾರರಿಗೆ ಸೂಚನೆ

'ಕಸ್ತೂರಿ' ತಿಂಗಳ ಒಂದನೇ ದಿನಾಂಕದೊಳಗೇ ಪ್ರಕಟವಾಗುವುದು. ತಿಂಗಳ ೫ ನೇ ದಿನಾಂಕದೊಳಗೆ ತಲುಪದೇ ಹೋದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಪತ್ರವ್ಯವಹಾರ ಮಾಡುವಾಗ ಚಂದಾ ನಂಬರು ಹಾಕಿರಬೇಕು.

# ಈ ಸಂಚಿಕೆಯಲ್ಲಿ


| | | | |
|---|---|---|---|
| ಸಹಚಿಂತನೆ | — | | ೩ |
| ಸ್ವಾನುಭವ | ... | ಬಿ. ಆರ್. ವಾಡಪ್ಪಿ | ೫ |
| ಸುದ್ದಿಗಾರರು ಕಳೆದುಕೊಂಡ ಅರಸು | ... | ಶಿವಾನಂದ ಜೋಶಿ | ೭ |
| ಕನ್ನಡ ಕಾಸಿಗೆ ಎಷ್ಟು ಕೇಜಿ? | ... | | ೧೪ |
| ಡಾ. ಶ್ರೀನಿವಾಸ ಕೌಲಗುಡ್ಡ | ... | ವಸಂತಿ ಚಂದ್ರ | ೧೭ |
| ಪದಾರ್ಥ ಚಿಂತಾಮಣಿ | — | ಪಾವೆಂ | ೨೫ |
| 'ತ್ಸುನಾಮಿ'ಗಳ ಬಗ್ಗೆ ಜಾಗೃತರಾಗಿರಿ | ... | ಬಿ. ಅರುಣನಾರಾಯಣ | ೨೬ |
| ಸುಭಾಷಿತಗಳು | ... | | ೩೦ |
| ನೋವು! | ... | ಮಾಧವ ನಾ. ಮಹಿಷಿ | ೩೧ |
| ಹಿಮಕರಡಿ | ... | ಟಿ. ಎಂ. ಸುಬ್ಬರಾಯ | ೩೮ |
| 'ತಕ್ಷಕಾಯ ಸ್ವಾಹಾ—ಇಂದ್ರಾಯ ಸ್ವಾಹಾ' | — | ಎಂ. ಡಿ. ರಾಣೆ | ೪೨ |
| (ಸಂ) ವೇದನೆ (ಕಥೆ) | ... | ಕೋರಮಕೊಂಡ ಸತ್ಯಾನಂದ | ೪೯ |
| ಗಿಡ ಮೂಲಿಕೆಗಳೆಡೆಯಲ್ಲಿ... | — | ಬಿ. ಎಸ್. ರಾಮಭಟ್ಟ | ೫೬ |
| ಧ್ರುವಗಳನ್ನು ಕ್ರಮಿಸಿದ ಧೀರರು | ... | 'ನ್ಯೂಸ್‌ವೀಕ್'ನಿಂದ | ೬೪ |
| ನಿಮ್ಮ ಶಬ್ದ ಭಾಂಡಾರ ಬೆಳೆಯಲಿ | — | | ೬೫ |
| ಕಡಲಾಮೆಗಳು | ... | ಎಸ್. ವಾಸುದೇವ | ೬೭ |
| ಬಿಳಿ ದೊರೆಯ ನ್ಯಾಯ ತೀರ್ಮಾನ | ... | ಜಿಮ್ ಕಾರ್ಬೆಟ್ | ೭೧ |
| ಕೀಟ ಪ್ರಪಂಚದಲ್ಲಿ ಮಕ್ಕಳ ಯೋಗಕ್ಷೇಮ | ... | ಕೆ. ಎ. ಕುಲಕರ್ಣಿ | ೭೬ |
| ಆಭಾಸಕರ ಪದ ಪ್ರಯೋಗ | ... | ಕೇಶವ ಐತಾಳ | ೮೧ |
| ಒಲವಿನ ಗೂಡು (ಕಥೆ) | ... | ಐಸಾಕ್ ಸಿಂಗರ್ | ೮೨ |
| ಅಪರಾಧಿ ಪ್ರಜ್ಞೆ ಮತ್ತು ಮಾನಸಿಕ ರೋಗ | ... | ಗೋಪಾಲಕೃಷ್ಣ ಎಡನೀರು | ೮೮ |
| ಇದುವೆ ಜೀವ ಇದು ಜೀವನ | ... | | ೯೪ |
| ಮನೆಯ ದೀಪ | ... | 'ಲಕ್ಷ್ಮಿ' | ೯೬ |
| ವಿಜಯಲಕ್ಷ್ಮೀ ತೋರಿದ ದಾರಿ | — | ಗೌರೀಶ ಕಾಯ್ಕಿಣಿ | ೯೯ |
| ಸಾವಿನ ಭಯ | ... | ಡಾ. ಕೆ. ಎಂ. ಧ್ರುವಕುಮಾರ | ೧೦೩ |
| ನಾಲ್ವತ್ತೇಳು ಗಂಟೆಗಳು (ಕಥೆ) | ... | ಸತ್ಯಾ ಸವನೂರು | ೧೦೯ |
| ವರ್ಗಕ್ಕೊಂದು ಸುಲಭ ಸೂತ್ರ | ... | ಪ್ರಕಾಶ ಪಿ. ಟಿ. | ೧೧೬ |


## ಪುಸ್ತಕ ವಿಭಾಗ


| | | | |
|---|---|---|---|
| ಅಬ್ಬಾಸ್ ಸಲಾಮತ್ | ... | ಎ. ಪಿ. ರಾಧಾಕೃಷ್ಣ | ೧೨೭ |

# ಸಹಚಿಂತನ

**ಡಾ. ಅಸುಂಡಿಯವರು**

ಕಸ್ತೂರಿಯ ಪುಸ್ತಕ ವಿಭಾಗದಲ್ಲಿ ಡಾ. ರಂ. ಶ್ರೀ. ಅಸುಂಡಿಯವರು ಕೈಕೊಳ್ಳಲಾಗಿದ್ದ ಪ್ರವಾಸಾನುಭವವನ್ನು ಅವರ ಪತ್ರಗಳಿಂದ ಆಯ್ದು 'ವಿಲಾಯಿತಿಯ ಪ್ರವಾಸವು' ಎಂಬ ಶೀರ್ಷಿಕೆಯಡಿಯಲ್ಲಿ ಪ್ರಕಟಿಸಿದ್ದಿರಿ. ಓದುತ್ತಾ ಹೋದಂತೆ ತುಂಬಾ ಹಿಡಿಸಿತು. ಅವರ ಅನುಭವ ಹೃದಯಂಗಮವಾದುದು. ನಿಸರ್ಗದ ವರ್ಣನೆಯನ್ನು ವಿಶೇಷವಾದ ರೀತಿಯಲ್ಲಿ ಕಂಡಿದ್ದಾರೆ. ಭೌತವಿಜ್ಞಾನಿಯಾದ ಇವರು ಕಂಗೊಳಿಸುತ್ತಿರುವ ಚಂದ್ರನ ಕಿರಣಗಳನ್ನು ಅಣುವಿನಲ್ಲಿಯ ಬ್ರೌನಿಯನ್ ಮೂವ್ಹಮೆಂಟಿಗೆ ಹೋಲಿಸಿದ್ದಾರೆ. ನಿಜಕ್ಕೂ ಕನ್ನಡ ಸಾಹಿತ್ಯವು ಐವತ್ತು ವರ್ಷಗಳಾಚೆಯೂ ಇಷ್ಟು ಪ್ರಭಾವಯುತವಾಗಿದೆಯೆನ್ನಲು ಹೃದಯ ತುಂಬಿ ಬರುವುದು. ನಮ್ಮಂಥ ವಿದ್ಯಾರ್ಥಿಗಳಿಗೆ ಇನ್ನೂ ಪರಿಚಯವಾಗದೆ ಇರುವ ರಂಗರಾಯರನ್ನು ಪರಿಚಯಿಸಿದುದಕ್ಕಾಗಿ ತುಂಬಾ ಕೃತಜ್ಞತೆಗಳು.

ಅಕ್ಕಲಕೋಟೆ — ಬಿದರಕೋಟೆ ದ. ಆ.

**ಹೀಗೇಕೆ ?**

ಒಂದೆರಡು ಕತೆಗಳನ್ನು ಬಿಟ್ಟರೆ ಉಳಿದೆಲ್ಲಾ ಕತೆಗಳು ಬಂಗಾಲಿ ಮೂಲ, ರಷ್ಯನ್ ಮೂಲ, ತೆಲುಗು ಮೂಲ ಈ ರೀತಿ ಅನುವಾದಿತ ಕಥೆಗಳೇ. ಕನ್ನಡ ಕಸ್ತೂರಿಯಲ್ಲಿ ಈ ಅವಸ್ಥೆ. ದಯವಿಟ್ಟು ಈ ಅನುವಾದಿತ ಕತೆಗಳನ್ನು ಪ್ರಕಟಿಸುವ ಬದಲು ಕನ್ನಡದಲ್ಲಿರುವ ಲೇಖಕರಿಗೆ ಅವಕಾಶಕೊಟ್ಟು ಕನ್ನಡ 'ಕಸ್ತೂರಿ'ಯೆಂದು ಹಾಗೂ ಅದು ತನ್ನ ಕನ್ನಡದ ಸುವಾಸನೆಯನ್ನು ಬೀರುತ್ತದೆಂದು ನಂಬಲೆ...?

ಹಿರಿಯೂರು — ಪಿ. ಲಿಂಗಾರಾಧ್ಯ

(ಕಸ್ತೂರಿಯಲ್ಲಿ ಬರುವ ಕತೆಗಳ ಬಗ್ಗೆ ನಿಮ್ಮ ಅಭಿಪ್ರಾಯವನ್ನು ಗಮನಿಸಿದ್ದೇವೆ. ಆದರೆ ಕಸ್ತೂರಿಯಲ್ಲಿ ವಿವಿಧ ಭಾಷೆಗಳ ಕಥೆಗಳು ಪ್ರಕಟವಾಗುತ್ತಿರುವುದಕ್ಕೆ ಕಾರಣ ವೈವಿಧ್ಯದ ಹಂಬಲ. ಇದು ಬರಿ ಕಥಾ ಮಾಸಿಕವಾಗಿದ್ದರೆ ನಿಮ್ಮ ಸೂಚನೆಯನ್ನು ಅಕ್ಷರಶಃ ಪಾಲಿಸಬಹುದಿತ್ತು. –ಸಂ.)

ಜೂನ್ ತಿಂಗಳ ಸಂಚಿಕೆಯಲ್ಲಿ ಪ್ರಕಟವಾಗಿರುವ ಶ್ರೀ ಹಾ. ತಿ. ಕೃಷ್ಣೇಗೌಡರ 'ಕಡೇಕಾರು ರಾಜಗೋಪಾಲಕೃಷ್ಣರಾಯರು' ಎಂಬ ಲೇಖನದಲ್ಲಿ 'ಶ್ರೀಕೃಷ್ಣಸೂಕ್ತಿ' ಪತ್ರಿಕೆಗೆ ಲೇಖನ ಬರೆಯುತ್ತಿದ್ದ ಅಂದಿನ ಪ್ರಸಿದ್ಧ ಲೇಖಕರ ಹೆಸರುಗಳನ್ನು ಬರೆಯುವಾಗ 'ಯಜ್ಞ ನಾರಾಯಣ ಅಡಿಗ' ಎಂಬ ಒಂದು ಹೆಸರು ಪ್ರಸ್ತಾಪಿಸಲ್ಪಟ್ಟಿದೆ. ನಾನು ಸಾಕಷ್ಟು 'ಶ್ರೀಕೃಷ್ಣ ಸೂಕ್ತಿ'ಗಳ ಹಳೇ ಪ್ರತಿಗಳನ್ನು ನೋಡಿದ್ದೇನೆ. ಅವರಲ್ಲಿ ನಾನು ತಿಳಿದ ಪ್ರಕಾರ ಯಜ್ಞನಾರಾಯಣ ಉಡುಪರೆಂಬವರು ಸಾಕಷ್ಟು ಲೇಖನಗಳನ್ನು ಬರೆದಿದ್ದರು. ಅಡಿಗರ ಲೇಖನಗಳನ್ನು ನೋಡಿದ ನೆನಪು ನನಗಿಲ್ಲ. ದಯವಿಟ್ಟು ಕೃಷ್ಣೇಗೌಡರೊಂದಿಗೆ ಸಮಾಲೋಚಿಸಿ ಇದರ ಬಗ್ಗೆ ಸರಿಯಾದ ಮಾಹಿತಿ ಕೊಡುವಿರಾ?

ಮೈಸೂರು — ಅರುಣ ಹರ್ಷವರ್ಧನ

**ಪ್ರಜ್ಞಾ ಚಕ್ಷು**

ನಿಮ್ಮ ಜೂನ್ ತಿಂಗಳ 'ಕಸ್ತೂರಿ'ಯನ್ನು ಓದಿದೆ. ಅದರಲ್ಲಿ ಬಿ. ಪಾಂಡುರಂಗಯ್ಯನವರ 'ಪ್ರಜ್ಞಾಚಕ್ಷು' ಕಥೆ ತುಂಬಾ ಚೆನ್ನಾಗಿದ್ದು ಅದರಲ್ಲೂ ಕುರುಡನ ಪಾತ್ರ ಮತ್ತು ಅವನ ಬುದ್ಧಿವಂತಿಕೆ, ನಟನೆಯನ್ನು ತುಂಬಾ ಸ್ವಾರಸ್ಯವಾಗಿ ರಚಿಸಿದ್ದಾರೆ.

ನಿಜಗೂರು — ಪಿ. ಬಿ. ಬಸವರಾಜು

ನಾನು 'ಕಸ್ತೂರಿ' ಓದುಗರಲ್ಲಿ ಒಬ್ಬ. ಜೂನ್ ೮೨ರ ಕಸ್ತೂರಿಯಲ್ಲಿ ಪಿ. ಆರ್. ತಿಪ್ಪೇಸ್ವಾಮಿಯವರು ಬರೆದ 'ಆದರ್ಶ ವೈದ್ಯ ಗೋವಿಂದಪ್ಪನವರು' ಎಂಬ ಲೇಖನ ಓದಿದೆ. ತುಂಬಾ ಚೆನ್ನಾಗಿದೆ. ಗೋವಿಂದಪ್ಪನವರನ್ನು ಓದುಗರಿಗೆ ಪರಿಚಯಿಸುವಲ್ಲಿ ಅವರೊಬ್ಬ ಶಸ್ತ್ರಚಿಕಿತ್ಸೆ ವೈದ್ಯರು ಎಂಬುದಾಗಿ ಲೇಖಕರು ತಿಳಿಸಿದ್ದಾರೆ. ಆದರೆ ಅವರು ಅನುಭವಿ ಚಿಕಿತ್ಸಾ ವೈದ್ಯರು.

ಮೈಸೂರು — ಹು. ಮ. ಲೋ.

ನಾನೊಬ್ಬ ಆರಂಭದಿಂದಲೂ 'ಕಸ್ತೂರಿ'ಯ ಓದುಗ. ಕಸ್ತೂರಿ ಬೆಲೆ ಹೆಚ್ಚಾದಷ್ಟು ಅದರ ಮೌಲ್ಯ ಕಡಿಮೆಯಾಗುತ್ತಿದೆ. ಅನೇಕ ಲೇಖನಗಳು

ಪುನರುಕ್ತಿಯಾಗುತ್ತಿವೆ. ಜೂನ್ ತಿಂಗಳ ಸಂಚಿಕೆಯಲ್ಲಿ ಪ್ರಕಟವಾಗಿರುವ 'ಪ್ರಜ್ಞಾಚಕ್ಷು' ಬಂಗಾಳಿ ಕತೆ ಅನುವಾದ ಬಿ. ಪಾಂಡುರಂಗಯ್ಯ. ಈ ಕತೆ ಯಥಾವತ್ತಾಗಿ ೧೯೬೩ರ ಅಕ್ಟೋಬರ್ ಸಂಚಿಕೆಯಲ್ಲಿ ಬರೆದವರು ಮನ್ಮಥನಾಥ ಗುಪ್ತ ಹಿಂದಿಯಿಂದ 'ಗಲ್ಲಿಗೇರಿದವನ ಕಥೆ' ಎಂದು ಪ್ರಕಟವಾಗಿದೆ. 'ಸಾರಿಕಾ'ದಿಂದ ಎಂದು ಕತೆಯು ಕೊನೆಯಲ್ಲಿದೆ. ಇದು ಪುನರುಕ್ತಿಯಲ್ಲವೆ?

ಗೌರಾಪುರ ಗೌ. ರು. ಓಂಕಾರಯ್ಯ

ಜೂನ್ ಸಂಚಿಕೆಯಲ್ಲಿ ಪ್ರಕಟವಾದ 'ನಾನೂ ಕತ್ತೆಯೂ' ಹರಟೆ ತೀರಾ ಸಪ್ಪೆಯೆನಿಸಿತು.

ಅದರ ಹದಿನಾಲ್ಕನೆ ಪ್ಯಾರಾದ ಅಂತ್ಯದಲ್ಲಿ ಒಂದು "ಸಾಲು ಕತ್ತೆಯು ಅಕ್ಕ ಕಾಲಿಗೆ ಹೇಗೆ ನಮಸ್ಕರಿಸುವಳೋ ಎಂಬುದನ್ನು ನೋಡಲು ಕಾತರಿಸುತ್ತಿದ್ದೆ" ಎಂಬುದಾಗಿದೆ. ಇದು ಉದ್ದೇಶ ಪೂರ್ವಕವೋ ಅಚ್ಚು ದೋಷವೋ ಎನಿಸಿ ನಕ್ಕೆ.

ಅಂಕೋಲಾ ರಾಮಕೃಷ್ಣ ಗುಂದಿ

## "ಮಕ್ಕಳ ಮುಗ್ಧತೆ"

ಜೂನ್ ತಿಂಗಳ ಕಸ್ತೂರಿಯಲ್ಲಿಯ "ಇದುವೆ ಜೀವ ಇದು ಜೀವನ" ವಿಭಾಗದ ೧೯ನೇ ಪುಟದಲ್ಲಿ ಪ್ರಕಟವಾದ ಪ್ರಭಾವತಿ ಸಂಪತ್ಕುರ ಲೇಖನ ಓದಿ ತುಂಬಾ ರೋಚಕ, ಸ್ವಾರಸ್ಯ ಅನಿಸಿತು. ದೇವರಿಗೆ ನೈವೇದ್ಯಕ್ಕೆಂದು ತಂದಿಟ್ಟ ಹಣ್ಣುಗಳನ್ನು ಕೇಳಿದ ಕವಿತಾಳಿಗೆ ಅಮ್ಮ "ನೀನೇ ದೇವರಿಗೆ ನೈವೇದ್ಯ ಮಾಡಿ ತಿನ್ನು" ಎಂತ ಹೇಳಿದಾಗ ಹಣ್ಣುಗಳನ್ನು ದೇವರ ಮುಂದೆ ಇಟ್ಟು "ಜಗಳ ಮಾಡದೇ ಎಲ್ಲರೂ ಸರಿಯಾಗಿ ಹಂಚಿ ತಿನ್ನಿ ಅಂತ ಸೂಚಿಸಿ, ತಾನೊಂದು ಹಣ್ಣು ತಿಂದ ಕವಿತಾಳ ಮಾತನ್ನು ಓದಿದಾಗ ನನಗೆ ನನ್ನ ಮೊಮ್ಮಗಳ ನೆನಪು ಬಂತು. ತಮ್ಮ ಹಳ್ಳಿಯಲ್ಲಿ ಪಾಯಿಖಾನೆಯನ್ನೇ ನೋಡಿರದಿದ್ದ ಈ ಮಗು, ನಮ್ಮಲ್ಲಿ ಅದನ್ನು ನೋಡಿ ಗುಡಿಯಿರಬೇಕೆಂದು ಭಾವಿಸಿ ಕೈಮುಗಿದಳು, ಒಮ್ಮೆ.

ಅಗ್ನೂರು (ಉ. ಕ.) ಡಾ. ಜಿ. ಆರ್. ಭಟ್ಟ

"ಪದಾರ್ಥ ಚಿಂತಾಮಣಿ" ಚೆನ್ನಾಗಿ ಉಂಟು. ಆದರ ಹಾಗೆಯೆ ವೈಜ್ಞಾನಿಕ ಪದಗಳ ಅರ್ಥವನ್ನು ಕೆದಕಿ ಅದರ ಹಿಂದಿರುವ ಕಾರಣಿಕ ಅಥವಾ ಮಾಹಾತ್ಮಕವಾದ ಸಂಗತಿಗಳನ್ನು ಮನೋರಂಜಕವಾಗಿ ಬಿಂಬಿಸುವ ಇನ್ನೊಂದು ಲೇಖನಮಾಲೆಯನ್ನೇಕೆ ಪ್ರಾರಂಭಿಸಬಾರದು?

ಹುಬ್ಬಳ್ಳಿ ಎಂ. ಆರ್. ಎಸ್. ರಾವ್

('ಕಸ್ತೂರಿ' ಬರೀ 'ಶಬ್ದಮಯ'ವೇ ಆಗಬಾರದಲ್ಲ! —ಸಂ.)

## ಹಾಸ್ಯ!

'ಕಸ್ತೂರಿ'ಗೆ ಹಾಸ್ಯಪ್ರಜ್ಞೆಯೆ ಇಲ್ಲವೆ? ನಗೆಹನಿಯನ್ನು ಏಕೆ ಕೈಬಿಟ್ಟಿದ್ದೀರಿ?

ಪುಣೆ ಅಪ್ಸರಾ ನಾಯಿಕ್

(ನಗೆಹನಿ ಇದ್ದರೆ ಮಾತ್ರ ಹಾಸ್ಯಪ್ರಜ್ಞೆ ಇದ್ದ ಹಾಗಾಯಿತೆ? ಅದರ ಬದಲು ಸ್ಥಾಯಿಯಲ್ಲವಾದರೂ ಮೇಲಿಂದ ಮೇಲೆ ಪ್ರಕಟವಾಗುವ ನಗೆ ಲೇಖನಗಳನ್ನೇಕೆ ಗಮನಿಸಲಿಲ್ಲ? —ಸಂ.)

## ಸಂದೇಹ

ನಿಮ್ಮ ಜೂನ್ ಸಂಚಿಕೆಯಲ್ಲಿ ಧಾರವಾಡದ ಶ್ರೀ ಎಸ್. ಕೆ. ಜೋಶಿ ಎಂಬುವವರು ಬರೆದ ಪತ್ರ(ಸಹಚಿಂತನ)ದಲ್ಲಿ ಓದಿದಾಗ ಒಂದು ಸಂದೇಹ ನನ್ನನ್ನು ಕಾಡುತ್ತಿದೆ. ಋಗ್ವೇದ ಸಂಹಿತೆಯ ಶ್ಲೋಕವೆಂದು ಒಂದು ಶ್ಲೋಕವನ್ನುದ್ಧರಿಸಿದ್ದಾರೆ. ನನಗೆ ತಿಳಿದಿರುವಂತೆ ಋಗ್ವೇದ ಕಾಲದಲ್ಲಿ ವಿಂಧ್ಯದ (ದಕ್ಷಿಣಾಪಥ) ಆರ್ಯರಿಗೆ ತಿಳಿದಿದ್ದ ನಾಡಾಗಿರಲಿಲ್ಲ. ಆದರೂ ಈ ಶ್ಲೋಕದಲ್ಲಿ ಗೋದಾವರಿ, ಕೃಷ್ಣಾ, ಭೀಮಾ, ಕಾವೇರಿಗಳಂತಹ ದಕ್ಷಿಣದ ನದಿಗಳ ಉಲ್ಲೇಖ ಬರುತ್ತಿರುವುದು— ಅದೂ ಋಗ್ವೇದದಲ್ಲಿ, ಆಶ್ಚರ್ಯಕರವನ್ನುಂಟು ಮಾಡುತ್ತದೆ.

ಶ್ರೀ ಜೋಶಿಯವರು ಪುರಾತತ್ವ ಇಲಾಖೆಯಲ್ಲಿದ್ದಾರೆಂದು ಅವರ ಈ ಲೇಖನವೇ ಹೇಳಿರುತ್ತದಾದ್ದರಿಂದ ನನ್ನ ಸಂದೇಹವನ್ನು ಅವರೇ ಪರಿಹರಿಸಬೇಕೆಂದು ನಾನು ನಿರೀಕ್ಷಿಸಬಹುದಲ್ಲವೆ?

ಕಲಬುರ್ಗಿ ಕ. ಶ್ರೀನಿವಾಸ

# ಕಸ್ತೂರಿ

ವರ್ಷ: ೨೬ ಜುಲೈ ೧೯೮೨ ಸಂಚಿಕೆ: ೧೧


## ಸ್ವಾನುಭವ


**ಬಿ. ಆರ್. ವಾಡಪ್ಪಿ**


ಮಾನವನಿಗೆ ಹುಟ್ಟಿನಿಂದ ಮರಣದವರೆಗೆ ಅನೇಕ ಅನುಭವಗಳು ಬರುತ್ತವೆ. ಅಷ್ಟೇ ಏಕೆ, ಪ್ರತಿಯೊಬ್ಬ ವ್ಯಕ್ತಿಯೂ ಒಂದೊಂದು ಅನುಭವದ ಮೊಟ್ಟೆಯಾಗಿರುತ್ತಾನೆ. ಅನುಭವಗಳಲ್ಲಿ ಭೇದವುಂಟು. ಅವರವರ ಅನುಭವ ಅವರಿಗೆ, ಅವರವರ ದರುಶನ ಅವರಿಗೆ. ಅನುಭವಜನ್ಯ ಸತ್ಯ ನಮಗೆ ಸುಖ ಕೊಡಬಲ್ಲದು. ಇನ್ನು ಕೆಲವರು ತಮ್ಮ ಅನುಭವ ಬಿಟ್ಟುಕೊಟ್ಟು ಪರರ ಅನುಭವದಿಂದ ಬಂದ ರುಚಿ ನೋಡಲು ಹವಣಿಸುತ್ತಾರೆ. ಅದು ಪರಪುಟ್ಟತನವಾದೀತು. ಅದಕ್ಕೆ ಅಷ್ಟು ರುಚಿ ಬಾರದು. ತನ್ನ ಅನುಭವವನ್ನೇ ವ್ಯಕ್ತಿಯು ದಿವ್ಯವಾಗಿಸಬೇಕು, ಅದನ್ನೇ ಬೆಳಗಿಸಬೇಕಲ್ಲದೆ ಅನ್ಯ ಶ್ರಮವು ಹೇಡಿಯ ಲಕ್ಷಣವು. ಅನುಭವವು ಜನ್ಮ ಜನ್ಮಾಂತರ ಕರ್ಮದ ಫಲವಾಗಿ ಬರುತ್ತದೆಂದು ವೇದಾಂತಿಗಳು ಹೇಳುವ ಮಾತು ಅರ್ಥಪೂರ್ಣವಾಗಿದೆ. ಇದರಿಂದ ಸ್ವಾನುಭವವೇ ಪ್ರತಿಯೊಬ್ಬ ಮಾನವನಿಗೆ ಅಗತ್ಯವಾಗಿದೆ. ನಿನ್ನಿನ ಕೈಯಲ್ಲಿ ಇಂದಿನ ನಮ್ಮ ಬಾಳ ಬುತ್ತಿಯಾಗುತ್ತದೆ. ಇಂದಿನದು ಭವಿಷ್ಯಕ್ಕೆ ನಿಧಿಯಾಗುತ್ತದೆ. ನಮ್ಮ ಕರ್ಮಾಚರಣೆ ಒಳ್ಳೆಯದಾದರೆ ಒಳ್ಳೇ ಫಲ, ಕೆಟ್ಟದ್ದಾದರೆ ಕೆಟ್ಟ ಫಲ. ಇದನ್ನು ನಾವು ಮಾಡುವ ನಿತ್ಯ ಕಾರ್ಯಗಳಲ್ಲಿ ಪಡೆದ ಅನುಭವದಿಂದ ಒಳ್ಳೇ ಕಾರ್ಯಕ್ಕೆ ಪ್ರವರ್ತರಾಗೋಣ: ವ್ಯಕ್ತಿಯೇ ರಾಷ್ಟ್ರದ ಶಕ್ತಿ

ಯಾಗಿರುತ್ತಾನೆ. ಆದುದರಿಂದ ಪ್ರತಿಯೊಬ್ಬ ವ್ಯಕ್ತಿಯ ಅನುಭವ ಕಾರ್ಯರೂಪಕ್ಕೆ ಇಳಿದಾಗ ಅದು ಸಾಮೂಹಿಕ ಸತ್ಕಾರ್ಯಕ್ಕೆ ಉಪಯೋಗ ಬೀಳುತ್ತದೆ. ಒಳ್ಳೆಯದು, ಕೆಟ್ಟದು ಎಂಬುವ ತಾರತಮ್ಯ ತಿಳಿವಿಗೆ ಹೊಳೆಯುವ ಮಾತು. ಕೆಲವರು ತಿಳಿವಿನ ವಿಚಾರ ಮಾಡರು. ಅಂಥವರಿಗೆ ತಮ್ಮ ಹಿತವೂ ಇಲ್ಲ; ಜನತೆಯ ಹಿತವೂ ಇಲ್ಲ; ರಾಷ್ಟ್ರದ ಹಿತವೂ ಇಲ್ಲ. ಇಂಥ ತಿಳಿಗೇಡಿಗಳ ಬಳಗ ಬೆಳೆದರೆ ಸಮಾಜಕ್ಕೆ ಅಹಿತ. ಸಮಾಜ ಬಹುಜನರ ಅನುಭವದಿಂದ ರೂಪಗೊಂಡದ್ದು. ಆದುದರಿಂದ ಸಮಾಜದ ಸ್ವಾಸ್ಥ್ಯಕ್ಕೆ ನಾವೆಲ್ಲರೂ ಹೊಣೆಗಾರರು. ಬಿಡಿಗಾಳಾದರೂ ರಾಶಿಯಾಗಬೇಕಾದಾಗ ಒಟ್ಟಾಗಬೇಕಲ್ಲ. ಒಟ್ಟಿನಲ್ಲಿ ಒಂದಾಗಿ ನಮ್ಮ ನಮ್ಮ ವ್ಯಕ್ತಿತ್ವವನ್ನು ಊರ್ಜಿತಗೊಳಿಸುವುದರಲ್ಲಿಯೇ ವಿಶಿಷ್ಟತೆ ಇದೆ. ವ್ಯಕ್ತಿಯು ತನ್ನ ಒಳ್ಳೆ ಅನುಭವದಿಂದ ತನ್ನ ಹಾಗೂ ಜೀವಿಸುತ್ತಿರುವ ಸಮಾಜದ ಹಾಗೂ ರಾಷ್ಟ್ರದ ಹಿತಚಿಂತನೆಯಲ್ಲಿ ತೊಡಗುವುದರಲ್ಲಿಯೇ ವೈಶಿಷ್ಟ್ಯವನ್ನು ಪಡೆಯಬೇಕು. ✡

# ಕೃತಘ್ನತೆಯ ನಂಜು

ಬಾಲಕನೊಬ್ಬ ಸಾಕಿದ ಸರ್ಪದೊಂದಿಗೆ ಆಟ ಆಡುತ್ತಿದ್ದ. ಆಡುತ್ತಾಡುತ್ತ, "ಏ ಸರ್ಪಣ್ಣಾ, ಒಂದು ವೇಳೆ ನಿನ್ನ ವಿಷದ ಹಲ್ಲು ಕಿತ್ತಿ ಹಾಕಿರದೆ ಇರುತ್ತಿದ್ದರೆ ನಾನು ನಿನ್ನೊಂದಿಗಿಷ್ಟು ಘನಿಷ್ಠ ಸಂಬಂಧವಿಟ್ಟುಕೊಳ್ಳುತ್ತಿರಲಿಲ್ಲ. ಹಾವಿನದು ಬಲು ಕೃತಘ್ನ ಜಾತಿಯಂತೆ. ನಾನು ಪುಸ್ತಕದಲ್ಲಿ ಓದಿದ್ದೇನೆ. ಒಂದು ಹಾವು ಚಳಿಯಲ್ಲಿ ನಡುಗಿ ಸಾಯುತ್ತ ಬಿದ್ದಿದ್ದಾಗ ರೈತನೊಬ್ಬ ಅದನ್ನು ಕಂಡು ಮರುಗಿ, 'ಬಾ ಹಾವಣ್ಣಾ, ಎಂದು ಅದನ್ನು ತನ್ನ ಬಗಲಲ್ಲಿಟ್ಟುಕೊಂಡು ನಡೆಯತೊಡಗಿದ. ಆತನ ಮೈಬಿಸಿಗೆ ಹಾವಿನ ಮೈನಡುಕ ಕಡಿಮೆಯಾಗಿ ಖುಷಿ ಮೂಡಿತು. ಆ ಖುಷಿಯಲ್ಲೇ ರೈತನನ್ನು ಕಚ್ಚಿತು. ಪಾಪ ರೈತ ಸತ್ತುಹೋದ..."

"ಸಾಕು ನಿಲ್ಲಿಸು," ಎಂದಿತು ಸರ್ಪ, ಪುಸ್ತಕದಲ್ಲಿರುವುದೆಲ್ಲ ಸುಳ್ಳು. ಪಕ್ಷಪಾತಿಗಳು ಬರೆದ ಸುಳ್ಳಿನ ಕಂತೆ ಅದು. ಆ ರೈತ ಹಾವು ಸತ್ತಿದೆ ಎಂದು ಭಾವಿಸಿದ್ದ. ಮನೆಗೊಯ್ದು ಅದರ ಸುಂದರ ಚರ್ಮ ಸುಲಿದು ಒಳಗೆ ಹತ್ತಿ ತುಂಬಿ ಚಂದ ಮಾಡಿಟ್ಟುಕೊಳ್ಳಬೇಕೆಂದಿದ್ದ. ಆದರೆ ಹಾವು ಸತ್ತಿರಲಿಲ್ಲ– ಕೊಲ್ಲಲು ನೋಡಿದ. ನೀನೇ ಹೇಳು, ಇದು ಸರಿಯೇ?"

"ಆಹಾ ಏನಾದರೂ ಹೇಳಬೇಡ. ಕೃತಘ್ನರು ಯಾವಾಗಲೂ ಏನಾದರೊಂದು ನೆವ ಹೇಳಿ ಉಪಕಾರ ಮಾಡಿದವರನ್ನೇ ದೂಷಿಸುತ್ತಾರೆ," ಎಂದ ಬಾಲಕ.

ಇವರಿಬ್ಬರ ಸಂಭಾಷಣೆಯನ್ನು ಆಲಿಸುತ್ತಿದ್ದ ತಂದೆ, "ನೀನು ಹೇಳಿದ್ದೇ ನಿಜ ಮಗು. ಆದರೆ ಕೃತಘ್ನರ ಬಗ್ಗೆ ಹೇಳುವಾಗ–ಕೇಳುವಾಗ ಎಚ್ಚರದಿಂದ ಇರಬೇಕು, ನೂರು ಬಾರಿ ಯೋಚಿಸಿ ಒಂದು ಮಾತು ಆಡಬೇಕು, ಯಾಕೆಂದರೆ ಇಂಥ ಸಂದರ್ಭದಲ್ಲಿ ಭಾವಾವೇಶಕ್ಕೊಳಗಾಗಿ ಅನಾಹುತ ಕೈಗೆಡೆಯಾಗುವ ಸಂದರ್ಭವೂ ಇರುತ್ತದೆ. ನೀನು ಆ ಹಾವಿನ ಬಗ್ಗೆ ಹೇಳಿದೆಯಲ್ಲ, ಅದಕ್ಕಿಂತ ಹೆಚ್ಚು ಭಯಂಕರರಾದವರು ನಮ್ಮಲ್ಲಿದ್ದಾರೆ. ಅವರು ಕಾರುವ ನಂಜು ಹಾವಿನ ನಂಜಿಗಿಂತ ನೂರು ಪಾಲು ಕೆಟ್ಟದ್ದು," ಎಂದ.

—ಗಾಟ್‌ಹೋಲ್ಡ್ ಎಫ್ರೈಂ ಲೆಸ್ಸಿಂಗ್



# ಸುದ್ದಿಗಾರರು ಕಳೆದುಕೊಂಡ ಅರಸು

**ಶಿವಾನಂದ ಜೋಶಿ**

ನಾನು ದೇವರಾಜ ಅರಸು ಅವರ ನಿಕಟವರ್ತಿಯಾಗಿರಲಿಲ್ಲ ಅಥವಾ ಈ ಬರೆಹದ ಮೂಲಕ ಅವರ ನಿಕಟವರ್ತಿಯಾಗಿದ್ದೆ ಎಂದು ಹೇಳಿಕೊಳ್ಳುವ ಹಂಬಲವೂ ನನಗಿಲ್ಲ. ಹಲವು ಸಂದರ್ಭಗಳಲ್ಲಿ ಪತ್ರಕರ್ತನಾಗಿ ನಾನು ಅವರನ್ನು ಸಂಚಾರದಲ್ಲಿ ಹಿಂಬಾಲಿಸಿದ್ದೆ. ಹತ್ತಿರದಿಂದ ನೋಡಿದ್ದೆ. ಅವರೊಂದಿಗೆ ಮಾತನಾಡಿದ್ದೆ. ಪತ್ರಿಕಾಗೋಷ್ಠಿಗಳಲ್ಲಿ ಜಗಳವಾಡಿದ್ದೆ ಕೂಡ. ನಾನು ಪತ್ರಕರ್ತ, ಇಂಥ ಪತ್ರಿಕೆಯವನೆಂಬುದು ಅವರಿಗೆ ಗೊತ್ತಿದ್ದಿತು. ಆದುದರಿಂದ ನಾನು ಇಲ್ಲಿ ಬರೆದಿರುವ ಕೆಲವು ಸಂಗತಿಗಳು ಒಬ್ಬ ಪತ್ರಕರ್ತನ ಅನುಭವಗಳು ಮಾತ್ರ. ಈ ಮಿತಿಯಲ್ಲಿಯೇ ಇವುಗಳನ್ನು ಗ್ರಹಿಸಬೇಕು.

೧೯೬೯ರಲ್ಲಿ ಕಾಂಗ್ರೆಸ್ಸು ಎರಡು ಹೋಳಾಗಿ ದೇವರಾಜ ಅರಸು ಅವರು ಇಂದಿರಾ ಗಾಂಧಿಯವರ ಬಲಗೈ ಆಗಿ ನಿಂತುಕೊಂಡಾಗ ಪತ್ರಕರ್ತರ ವಿಶೇಷ ಗಮನ ಸೆಳೆದರು. ಅದಕ್ಕೂ ಮುಂಚೆ ಅನೇಕ ವರ್ಷಗಳಕಾಲ ಶಾಸಕನಾಗಿ, ನಿಜಲಿಂಗಪ್ಪ ಅವರ ಮಂತ್ರಿಮಂಡಳದ ಸದಸ್ಯನಾಗಿ ಸಾಕಷ್ಟು ಹೆಸರುಗಳಿಸಿದ್ದರೂ ಸುದ್ದಿಯ ಸೃಷ್ಟಿಕರ್ತನಾಗಿ, ಪತ್ರಕರ್ತರ ಕಣ್ಣುಗೊಂಬೆಯಾಗಿ ಅರಸು ವ್ಯಕ್ತಿತ್ವ ಪ್ರಕಟವಾದದ್ದು ೧೯೬೯ರ ನಂತರವೆ.

ಇಂಡಿಕೇಟ್ ಮತ್ತು ಸಿಂಡಿಕೇಟ್‌ಗಳ ಬಲಾಬಲ ಪರೀಕ್ಷೆಯ ಕುರುಕ್ಷೇತ್ರವಾಗಿದ್ದ ೧೯೭೧ರ ಲೋಕಸಭಾ ಚುನಾವಣೆಗಳ ಕಾಲಕ್ಕೆ ಅರಸು ಅವರನ್ನು ನಾನು ಮೊದಲ ಸಲ ಮುಖತಃ ಭೆಟ್ಟಿಯಾದದ್ದು. ಹುಬ್ಬಳ್ಳಿಗೆ ಬಂದಿದ್ದ ಅವರು ಪ್ರವಾಸಿ ಮಂದಿರದಲ್ಲಿ ಇಳಿದುಕೊಂಡಿದ್ದರು. ಅವರ ಚುನಾವಣೆ ಲೆಕ್ಕಾಚಾರ ಕೇಳಲು ಹೋಗಿದ್ದೆ. ಅವರನ್ನು ಕಾಣಲು ಕೋಣೆಯ ಹೊರಗೆ ಆರೆಂಟು ಜನರು ನಿಂತುಕೊಂಡಿದ್ದರು. ಪತ್ರಕರ್ತನೆಂಬ ಅಧಿಕೃತೆಯಿಂದ ನಾನು ನೇರವಾಗಿ ಕೋಣೆಯೊಳಗೆ ನುಗ್ಗಿದೆ. ಮೂಗು ಎದ್ದು ಕಾಣುತ್ತಿದ್ದ, ಗಂಭೀರ ಮುಖದ ಅರಸು ಯಾವುದಕ್ಕೋ ತಡಕಾಡುತ್ತಿದ್ದರು. ಬಹುಶಃ ಕನ್ನಡಕವೇ ಇದ್ದಿರಬೇಕು. ಅವರೊಂದಿಗೆ ಮುಂದೆ ಇಂದಿರಾ ಸಂಪುಟದಲ್ಲಿ ಬಾಸುಲಿ ಮಂತ್ರಿಯಾದ ಕೆ.ಕೆ. ಶಹಾ ಅವರಿದ್ದರು. ಅರಸು ನನ್ನನ್ನು ನೋಡಿ, "ಏನು ?" ಎಂದರು. ನಾನು ನನ್ನ ಪರಿಚಯ ಹೇಳಿಕೊಂಡೆ. "ಈಗ ನಾನು ಹೇಳಬೇಕಾದುದು ಏನೂ ಇಲ್ಲ," ಎಂದುಬಿಟ್ಟರು.

ಅವರ ಮಾತನ್ನು ಮನಸ್ಸಿಗೆ ಹಚ್ಚಿಕೊಳ್ಳದೆ, "ಬದಲಾದ ಪರಿಸ್ಥಿತಿಯಲ್ಲಿ, ರಾಜ್ಯದಲ್ಲಿ ಎಷ್ಟು ಸೀಟುಗಳು ನಿಮ್ಮ ಪಕ್ಷಕ್ಕೆ ಬರುವ ನಿರೀಕ್ಷೆ ಇದೆ?" ಎಂದು ಕೇಳಿದೆ. ಅವರ ಮುಖ ಇನ್ನಷ್ಟು ಗಂಭೀರವಾಯಿತು. ಸಸುಗೋಪದಿಂದಲೇ ಉತ್ತರಿಸಿದರು, "ಎಷ್ಟು ಎಂದರೆ ಏನರ್ಥ? ಎಲ್ಲ ಇಪ್ಪತ್ತಾರೂ ನಮಗೇ."

"ಏನು ಆಧಾರ?" ಎಂದು ಪಟ್ಟುಬಿಡದೆ ಕೇಳಿದೆ.

"ನಾನು ಹೇಳ್ತೀನಲ್ಲ, ಸಾಲದೆ? ಫಲಿತಾಂಶ ಬಂದ ಮೇಲೆ ನಿಮಗೇ ಗೊತ್ತಾಗ್ತದೆ," ಎಂದರು

ಅರಸು ಖಾರವಾಗಿ. ಅವರ ಹಿಂದಿನ ರಾಜಕೀಯ ಅನುಭವದ ಕಹಿ ಎಲ್ಲ ಅವರ ಮುಖದಲ್ಲಿ ಹೆಪ್ಪುಗಟ್ಟಿ ನಿಂತಹಾಗಿತ್ತು.

ಇವರಿಗೆ ಪ್ರಶ್ನೆ ಕೇಳುವುದೇ ಕಷ್ಟ ಎಂದುಕೊಂಡೆ. ಕೇಳಿದರೂ ಉತ್ತರಿಸಿಯಾರೆ? ಎನ್ನುವ ಅನುಮಾನ ಬೇರೆ. ಇನ್ನೂ ಏನೋ ಕೇಳಬೇಕು ಎನ್ನುವಷ್ಟರಲ್ಲಿಯೇ ಅರಸು ಗುಡುಗಿದರು: "ನೀವು ಏನಾದರೂ ಬರೆದುಕೊಳ್ಳಿ, ನನಗೇನಂತೆ," ಎಂದು, ಮಾತು ಮುಗಿಸುವ ಧಾಟಿಯಲ್ಲಿ. ಅವರು ಹೊರಗೆ ಹೊರಡುವ ತಯಾರಿಯಲ್ಲಿದ್ದರು.

ಹತ್ತಿರದಲ್ಲಿಯೇ ಕುಳಿತು 'ಮೋಜು' ನೋಡುತ್ತಿದ್ದ ಶಹಾ ಅವರು ಎದ್ದು ನಿಂತು ನನ್ನ ಹೆಗಲು ಮುಟ್ಟಿ ಮುಗುಳ್ನಗೆ ಸೂಸುತ್ತ ನನ್ನನ್ನು ಹೊರಗೆ ಕರೆದುಕೊಂಡು ಬಂದರು. ನನ್ನ ಹೆಸರು, ನಾನು ಪ್ರತಿನಿಧಿಸುವ ಪತ್ರಿಕೆ ("ಓಹ್, ನನಗೆ ನಿಮ್ಮ ಆರ್. ಆರ್. ದಿವಾಕರ ಗೊತ್ತು,") ನನ್ನ ಸೇವಾನುಭವ ಕುರಿತು ಕೇಳಿ ತಿಳಿದುಕೊಂಡರು.

"ನಿಮ್ಮ ರಾಜ್ಯದಲ್ಲಿ ನಮಗೆ ಎಷ್ಟು ಸೀಟುಗಳು ಬರುತ್ತವೆಂಬುದು ನಿಮ್ಮ ಅಂದಾಜು ?" ಎಂದು ಶಹಾ ಕೇಳಿದರು.

"ಸುಮಾರು ಹದಿನಾರರಿಂದ ಹದಿನೆಂಟು," ಎಂದೆ.

"ಓಹ್, ಅದು ಸಾಕಷ್ಟಾಯಿತಲ್ಲ. ಅಷ್ಟು ಸೀಟುಗಳು ನಿಜವಾಗಿಯೂ ಬಂದಾವೆಯೇ?"

"ಬರಬಹುದು. ಆದರೆ ನಿಮ್ಮ ಪ್ರದೇಶ ಕಾಂಗ್ರೆಸ್ ಅಧ್ಯಕ್ಷರು ಎಲ್ಲ ೨೬ನ್ನೂ ಗೆಲ್ಲುತ್ತೇವೆ ಅನ್ನುತ್ತಾರಲ್ಲ?"

"ಅವರಿಗೆ ಉತ್ಸಾಹ, ವಿಶ್ವಾಸ ಸ್ವಲ್ಪ ಜಾಸ್ತಿ," ಎಂದರು ಶಹಾ.

ಅರಸು, ಈ ಉತ್ಸಾಹ, ವಿಶ್ವಾಸವನ್ನು ಎಂದೂ ಕಳೆದುಕೊಳ್ಳಲಿಲ್ಲ. ಇಂಡಿಕೇಟ್ ಕಾಂಗ್ರೆಸ್ಸು ಆಗ ಎಲ್ಲ ಇಪ್ಪತ್ತಾರೂ ಸೀಟುಗಳನ್ನು ಗೆದ್ದುಕೊಂಡಿತೆಂಬುದು ಈಗ ಕೇವಲ ಇತಿಹಾಸ.

ಆಗ ಒರಟಾಗಿ, ಮುಂಗೋಪಿಯಾಗಿ ಕಂಡುಬಂದಿದ್ದ ಅರಸು ಅವರೊಂದಿಗೆ ಮುಂದಿನ ವರ್ಷಗಳಲ್ಲಿ ಹೆಚ್ಚು ಹೆಚ್ಚು ಮಾತನಾಡಿದಂತೆ ಹಾಗಲ್ಲ ಎನಿಸಿತು. ಅವರ ಒಳಪದರು ಮೃದು, ಅನುಕಂಪಪೂರ್ಣ. ಆದರೂ ಒಮ್ಮೊಮ್ಮೆ ಮುಂಗೋಪ ಪುಟದೇಳದಿರುತ್ತಿರಲಿಲ್ಲ.

ಅರಸು ಮುಖ್ಯ ಮಂತ್ರಿಯಾದ ನಂತರ ಅವರ ಉತ್ತರ ಕರ್ನಾಟಕ ಸಂಚಾರದಲ್ಲಿ ನಾನು ಅವರನ್ನು ಹಿಂಬಾಲಿಸಿದ್ದೇನೆ, ಅವರ ಕಾರ್ಯಕ್ರಮಗಳನ್ನು ನನ್ನ ಪತ್ರಿಕೆಗೆ ವರದಿ ಮಾಡಿದ್ದೇನೆ. ಅವರು ಉತ್ತರ ಕರ್ನಾಟಕಕ್ಕೆ ಬಂದಾಗ, ಬೆಳಗಿನಲ್ಲಿ ಎದ್ದ ಕೂಡಲೇ 'ಸಂಯುಕ್ತ ಕರ್ನಾಟಕ' ಕೇಳುತ್ತಿದ್ದರು.

ಅವರ ಉತ್ತರ ಕರ್ನಾಟಕ ಸಂಚಾರ– ಅದು ಯಾವ ಜಿಲ್ಲೆಯಲ್ಲಿಯೇ ಆಗಲಿ– ಹುಬ್ಬಳ್ಳಿಯಿಂದಲೇ ಆರಂಭವಾಗುತ್ತಿದ್ದಿತು. ಇಲ್ಲಿಂದ ಹೊರಡುವ ಮುನ್ನ ಒಂದು ಪತ್ರಿಕಾ ಗೋಷ್ಠಿ ಆಗಲೇ ಬೇಕು. ಅವರಿಗೆ ಬೇಕಾಗಿರಲಿ, ಬಿಡಲಿ ನಾವು ಕೆಲವರು ಭೆಟ್ಟಿಯಾಗುವುದಾಗಿ ಹೇಳಿಕಳಿಸುತ್ತಿದ್ದೆವು. ಅವರು ಎಷ್ಟೇ ವಿಳಂಬವಾಗಿರಲಿ, ಇಲ್ಲ ಎನ್ನುತ್ತಿರಲಿಲ್ಲ.

ಸಂಚಾರದಲ್ಲಿ ಅವರಿಗೆ ನಿರ್ದಿಷ್ಟ ಕಾರ್ಯಕ್ರಮಗಳಿರುತ್ತಿದ್ದುವು. ಆದರೆ ಜನ ಸೇರಿದ ಕಡೆಗಳಲ್ಲೆಲ್ಲ ಅವರು ನಿಂತುಕೊಳ್ಳುತ್ತಿದ್ದರು. ಅಹವಾಲುಗಳನ್ನು ಕೇಳಿಕೊಳ್ಳುತ್ತಿದ್ದರು. ಮನವಿಗಳನ್ನು ಓದಿ ಅವುಗಳ ಮೇಲೆ ತಮ್ಮ ಆಜ್ಞೆಗಳನ್ನು ಬರೆಯುತ್ತಿದ್ದರು. ಸ್ಥಳದಲ್ಲಿಯೇ ಸಂಬಂಧಿಸಿದ ಅಧಿಕಾರಿಗಳನ್ನು ಕರೆದು ಕ್ರಮಗಳನ್ನು ಕೈಕೊಳ್ಳಲು ತಾಕೀದು ಮಾಡುತ್ತಿದ್ದರು. ಅವರ ಗ್ರಹಣ ಶಕ್ತಿ ಅಪಾರ. ಸಮಸ್ಯೆಗಳನ್ನು ಕ್ಷಣದಲ್ಲಿಯೇ ಅರ್ಥಮಾಡಿಕೊಂಡು ಅಧಿಕಾರಿಗಳ ಮುಖ ನೋಡುತ್ತಿದ್ದರು. ಸರಿಯಾದ ಉತ್ತರ ಬಂದರೆ ಸರಿ, ಇಲ್ಲವಾದರೆ ಸಿಡುಕಿನಿಂದ ಕಾಗದವನ್ನು ಅವರತ್ತ ಎಸೆಯುತ್ತಿದ್ದರು. "ಸರಿಯಾಗಿ ಕೆಲಸ ಮಾಡುವುದನ್ನು ಕಲಿತುಕೊಳ್ಳಿರಿ," ಎಂದು ಎಚ್ಚರಿಸದಿರುತ್ತಿರಲಿಲ್ಲ.

ಉತ್ತರ ಕರ್ನಾಟಕದಲ್ಲಿ ಹಿಂದೆ, ಮುಂಬೈ ಸರಕಾರದ ಅನೇಕ ಕಾನೂನುಗಳು ಜಾರಿಯಲ್ಲಿದ್ದವು. ಮೈಸೂರು ಸರಕಾರದ ನೀತಿಗಳಿಗೆ ಅವು ಸುಸಂಗತವಾಗಿರಲಿಲ್ಲ. ಅನೇಕ ಸಲ ಅಭಿವೃದ್ಧಿ ಕೆಲಸಗಳಲ್ಲಿ ವ್ಯಾವಹಾರಿಕ ತೊಂದರೆಗಳು ಉದ್ಭ

ವಿಸುತ್ತಿದ್ದೆವು. ವಿಜಾಪುರ ಜಿಲ್ಲೆಯ ಬೀಳಗಿ ತಾಲ್ಲೂಕಿನ ರೈತರಿಗೆ. ಇಂಥ ಯಾವುದೋ ಕಾರಣದಿಂದ ಪಂಪ್‌ಸೆಟ್‌ಗಳಿಗೆ ವಿದ್ಯುಚ್ಛಕ್ತಿ ಸಿಕ್ಕದೆ ತೊಂದರೆ ಎದುರಾಗಿತ್ತು. ಕೃಷ್ಣಾ ಮೇಲ್ದಂಡೆ ಯೋಜನಾ ಪ್ರದೇಶಕ್ಕೆ ಹೊರಟಿದ್ದ ಅರಸು ಅವರ ಕಾರು ರೈತರನ್ನು ನೋಡಿ ನಿಂತುಕೊಂಡಿತು. ಸಮಸ್ಯೆಯನ್ನು ಕೇಳಿದೊಡನೆ ಅವರ ಮುಖ ಗಂಟಿಕ್ಕಿತು. ಅಧಿಕಾರಿಯನ್ನು ಕರೆಸಿ ವಿಚಾರಿಸಿದರು. ಅವರು ಯಾವುದೋ ನೆಪ ಹೇಳಿದರು. "ನಿಮಗೆ ಬೇಕಾದರೆ ಏನು ಬೇಕಾದ್ದು ಮಾಡ್ತೀನಿ, ರೈತರಿಗೆ ಪಾವರ್ ಕೊಡಲು ಕಾನೂನಿನ ನೆಪ ಹೇಳ್ತೀರಾ? ನೀವು ಕೆಲಸ ಮಾಡೋ ರೀತಿ ನನಗೆ ಗೊತ್ತಿಲ್ಲವೇ? ಮೊದಲು ಅವರಿಗೆ ಸಹಾಯ ಮಾಡಿ, ನಿಮ್ಮ ತೊಂದರೇನ ನಂತರ ನನ್ನ ಹತ್ತಿರ ಮಾತನಾಡಿ," ಎಂದು ಗುಡುಗಿದರು. ರೈತರು ಅರಸು ಅವರಿಗೆ ಜಯಕಾರ ಹಾಕಿದರು. ನಾವು ನಿಂತು ಟಿಪ್ಪಣಿಗಳನ್ನು ಗುರುತು ಹಾಕಿಕೊಳ್ಳುತ್ತಿದ್ದಾಗ ಕ್ಷಣಾರ್ಧ ನಮ್ಮತ್ತ ಅರ್ಥಗರ್ಭಿತವಾಗಿ ನೋಡುತ್ತಿದ್ದರು.



"ಏನು ಕಮಲಮ್ಮಾ, ಹೊಸಾ ಸೊಸೆ ಮನೇಗೆ ಬಂದಿರೊ ಹಾಗಿದೆ? ಅದಕ್ಕೇ ದಬ್ಬತ್ತುಂಬಾ ಸೀಮೆಣ್ಣೆ ತಗೊಂಡೋಗ್ತಿದೀರಿ ಅಲ್ವಾ?"

ಅರಸು ಬೇಸರವಿಲ್ಲದೆ ಅಹವಾಲುಗಳನ್ನು ಕೇಳುತ್ತಿದ್ದರು, ಮನವಿಗಳನ್ನು ಓದುತ್ತಿದ್ದರು. ಅವರಿಗೆ ಎಲ್ಲ ಇಲಾಖೆಗಳ ಕೆಲಸದ ಪರಿಚಯವಿದ್ದ ಕಾರಣ ಎಷ್ಟೋ ಸಲ ತಕ್ಷಣ ನಿರ್ಣಯ ಕೈಕೊಳ್ಳುತ್ತಿದ್ದರು. ಸಂಬಂಧಪಟ್ಟ ಮಂತ್ರಿ ಪಕ್ಕದಲ್ಲಿದ್ದರೂ ಕೇಳುತ್ತಿರಲಿಲ್ಲ.

ದಾರಿಯಲ್ಲಿ ತಡವಾಯಿತೆಂದು ಅಥವಾ ತಮಗೆ ದಣಿವಾಯಿತೆಂದು ಅರಸು ಎಂದೂ ನಿರ್ದಿಷ್ಟಪಡಿಸಿದ ಕಾರ್ಯಕ್ರಮಗಳನ್ನು ರದ್ದುಗೊಳಿಸುತ್ತಿರಲಿಲ್ಲ. ಅನೇಕ ಸಲ ಮಧ್ಯರಾತ್ರಿಯಾದರೂ ಅವರ ಕಾರ್ಯಕ್ರಮಗಳು ಮುಗಿಯುತ್ತಿರಲಿಲ್ಲ. ಮಳೆ, ಬಿಸಿಲಿಗೂ ಅವರು ಅಳುಕುತ್ತಿರಲಿಲ್ಲ. ಆದರೂ ಅವರು ಮಾರುದಿನ ಬೆಳಗಿನಲ್ಲಿ ಜನಸಂದಣಿಯನ್ನು ಎದುರಿಸಲು ಸಿದ್ಧರಾಗುತ್ತಿದ್ದರು.

ತಮ್ಮೊಂದಿಗೆ ಬಂದ ಪತ್ರಕರ್ತರ ಊಟ, ವಸತಿ ಕುರಿತು ತಪ್ಪದೆ ವಿಚಾರಿಸುತ್ತಿದ್ದರು. ಊಟದ ವಿಷಯದಲ್ಲಿ ಅರಸು ಯಾವಾಗಲೂ ಧಾರಾಳ— ಹೊಟ್ಟೆ ತಮ್ಮದೇ ಆಗಿರಲಿ, ಇನ್ನೊಬ್ಬರದೇ ಆಗಿರಲಿ. ಸಂಚಾರ ಕಾಲದಲ್ಲಿ ಜನರ ಮಧ್ಯೆ ಕುಳಿತು ಎಲೆಗೆ ಹಾಕಿದುದನ್ನು ಪಟ್ಟಾಗಿ ಹೊಡೆಯುತ್ತಿದ್ದರು.

ಒಮ್ಮೆ ಬದಾಮಿ ತಾಲ್ಲೂಕಿನ ಮಹಾಕೂಟದಲ್ಲಿ ಊಟದ ಏರ್ಪಾಟು ಆಗಿತ್ತು. ನಾವು ಅವರಿಂದ ಸ್ವಲ್ಪ ದೂರದಲ್ಲಿ ಕುಳಿತು ಊಟ ಮಾಡಿದೆವು. ಅರಸು ನಮ್ಮನ್ನು ನೋಡಿರಲಿಲ್ಲ. ನಾವು ಊಟ ಮುಗಿಸಿ ಗಿಡದ ನೆರಳಿನಲ್ಲಿ ನಿಂತುಕೊಂಡಿದ್ದೆವು. ಆಗ ಯಾರೋ ಬಂದು "ಪೇಪರಿನವರನ್ನು ಮುಖ್ಯ ಮಂತ್ರಿ ಕರೀತಾರೆ" ಎನ್ನುವ ಸಂದೇಶ ಮುಟ್ಟಿಸಿದರು. ಏನೋ 'ಆಹಾರ' ಇದೆ ಎಂದು ಗಡಬಡಿಸಿ ಹೋದೆವು. ಮಂಚದ ಮೇಲೆ ಹಾಸಿದ ಗಾದಿಯ ಮೇಲೆ ಚಕ್ಕಳ ಹಾಕಿ ಕುಳಿತುಕೊಂಡಿದ್ದ ಅರಸು ಮುಗುಳ್ನಗೆಯಿಂದ ಸ್ವಾಗತಿಸಿದರು. ಊಟವಾಯಿತೆ ? ಎಂದು ವಿಚಾರಿಸಿದರು. ತಮ್ಮ

ಮುಂದೆ ರಾಶಿಯಾಗಿ ಬಿದ್ದುಕೊಂಡಿದ್ದ ದ್ರಾಕ್ಷಿ ಮತ್ತು ತಾಂಬೂಲದತ್ತ ಕೈ ಮಾಡಿದರು. ಏನೋ ಹೇಳಲಿದ್ದಾರೆಂದು ನಿರೀಕ್ಷಿಸುತ್ತ ನಾವು ದ್ರಾಕ್ಷಿಯನ್ನು ಕಬಳಿಸಿದೆವು. ನಾವು ನಿರೀಕ್ಷಿಸಿದ್ದೇ ಬೇರೆ. ಅವರು ಹೇಳಿದ್ದೇ ಬೇರೆ. "ನೀವು ಹುಬ್ಬಳ್ಳಿಯವರು ಒಳ್ಳೆಯವರಪ್ಪ. ಚೆನ್ನಾಗಿ ಬರೆಯುತ್ತೀರಿ." ಆ ಮಾತು ಕೇಳಿ ನಮಗೆ ಸಂತೋಷವಾಗದಿರಲಿಲ್ಲ.

(ಹಿಂದೊಮ್ಮೆ ಆಗಿನ ಮುಖ್ಯ ಮಂತ್ರಿ ವೀರೇಂದ್ರ ಪಾಟೀಲರ ಧಾರವಾಡ ಜಿಲ್ಲಾ ಸಂಚಾರದಲ್ಲಿ ನಾವಿಬ್ಬರು ಅವರೊಂದಿಗೆ ಹೋಗಿದ್ದೆವು. ಇಡೀ ದಿನದ ಸಂಚಾರದಲ್ಲಿ ನಮ್ಮ ಯೋಗಕ್ಷೇಮ ವಿಚಾರಿಸುವುದಿರಲಿ, ಅವರು ನಮ್ಮೊಂದಿಗೆ ಒಂದೇ ಒಂದು ಮಾತು ಕೂಡ ಆಡಿರಲಿಲ್ಲ.)

ವಿಜಾಪುರ ಜಿಲ್ಲೆಯ ಮೇಲೆ ಅರಸು ಅವರ ಪ್ರೇಮ ಹೆಚ್ಚು. ಇಪ್ಪತ್ತು ಅಂಶಗಳ ಅನುಷ್ಠಾನದ ಮೇಲ್ವಿಚಾರಣೆಯನ್ನು ಅವರು ತಾವೇ ವಹಿಸಿಕೊಂಡಿದ್ದರು. ಅವರು ಜಿಲ್ಲಾಭಿವೃದ್ಧಿ ಮಂಡಳಿ ಸಭೆ ನಡೆಸುತ್ತಿದ್ದ ವೈಖರಿಯನ್ನು ನೋಡಿದವರೇ ಬಲ್ಲರು. ಸಾಮಾನ್ಯವಾಗಿ ಈ ಸಭೆಗಳಿಗೆ ಪತ್ರಕರ್ತರಿಗೆ ಪ್ರವೇಶ ಇರುವುದಿಲ್ಲ. ನಾವು ಅರಸು ಅವರ ಹಿಂದೆ ನುಗ್ಗಿಬಿಡುತ್ತಿದ್ದೆವು. ನಾವು ಪತ್ರಕರ್ತರೆಂಬುದು ಗೊತ್ತಿದ್ದವರು ಸಹ ಆಗ ಅಸಹಾಯಕರಾಗಿ ಸುಮ್ಮನಿರಬೇಕಾಗುತ್ತಿದ್ದಿತು. ಅರಸು ಈ ಸಭೆಯಲ್ಲಿ ಪ್ರತಿಯೊಂದು ಇಲಾಖೆಗೆ ಹಾಕಿಕೊಟ್ಟ ಗುರಿ ಮತ್ತು ಅದರ ಸಾಧನೆಯ ಪ್ರಗತಿಯನ್ನು ಸ್ವತಃ ಸಮೀಕ್ಷಿಸುತ್ತಿದ್ದರು. ಪ್ರಗತಿ ಅತೃಪ್ತಿಕರವೆನಿಸಿದರೆ ಸಂಬಂಧಿಸಿದ ಅಧಿಕಾರಿಯನ್ನು ಕೂಗಿ, ಅದರ ಕಾರಣಗಳನ್ನು ತಾವೇ ವಿಶ್ಲೇಷಿಸಿ, ಅವರ ತಪ್ಪುಗಳನ್ನು ಮುಖಕ್ಕೆ ಹಿಡಿದು ನೀರಿಳಿಸಿ ಬಿಡುತ್ತಿದ್ದರು. ನೆಪಗಳನ್ನು ಅವರೆಂದೂ ಕ್ಷಮಿಸುತ್ತಿರಲಿಲ್ಲ. ಜಿಲ್ಲಾಧಿಕಾರಿ ಹಾಗೂ ಜಿಲ್ಲಾ ಪೋಲೀಸ್ ಅಧಿಕಾರಿಗಳನ್ನೂ ಅವರು ಬಿಡುತ್ತಿರಲಿಲ್ಲ. ಶಾಸಕರು, ಅಧಿಕಾರಿಗಳ ವಿರುದ್ಧ ದೂರು ಹೇಳಿದರೆ ಅಲ್ಲಿಯೇ ವಿಚಾರಿಸಿ ಯಾರು ಸರಿ, ಯಾರು ತಪ್ಪು ಎಂಬುದನ್ನು ತೀರ್ಮಾನಿಸುತ್ತಿದ್ದರು. ಶಾಸಕರ ದೂರು ಸರಿಯಿಲ್ಲವೆಂದು ಕಂಡುಬಂದರೆ, "ನಿಮ್ಮ ರಾಜಕಾರಣ ಇಲ್ಲಿ ಬೇಡ," ಎಂದು ನಿರ್ಭಿಡೆಯಿಂದ ಹೇಳಿಬಿಡುತ್ತಿದ್ದರು.

ತಮ್ಮ ಪಕ್ಷದ ಕಾರ್ಯಕರ್ತರು ಹೇಳುವ ಮಾತುಗಳನ್ನು ಮತ್ತು ದೂರುಗಳನ್ನು ಅವರು ಗಮನವಿಟ್ಟು ಕೇಳುತ್ತಿದ್ದರು. ಒಂದೊಂದು ಸಲ ಅವರು ತಪ್ಪು ದಾರಿಗೆ ಎಳೆಯಲ್ಪಡುತ್ತಿದ್ದುದೂ ನಿಜ. ಒಮ್ಮೆ ವಿಜಾಪುರ ಜಿಲ್ಲೆ ಸಂಚಾರಕ್ಕೆ ಹೊರಡುವ ಸಂದರ್ಭ. ನಮ್ಮ ವಾಹನ ಸ್ವಲ್ಪ ಮುಂದಾಗಿ ಹೊರಟಿತು. ನಾವು ನರಗುಂದ ಮುಟ್ಟಿದಾಗ ಮುಖ್ಯ ಮಂತ್ರಿಗಳು ಹುಬ್ಬಳ್ಳಿಯಿಂದ ಹೊರಟೇ ಇಲ್ಲವೆಂದು ತಿಳಿಯಿತು. ಕೊನೆಗೆ ಅದರ ಕಾರಣ ನಮಗೆ ವಿಜಾಪುರದಲ್ಲಿ ತಿಳಿಯಿತು. ಹುಬ್ಬಳ್ಳಿಯಲ್ಲಿ ಕೆಲವರು ಕಾಂಗ್ರೆಸ್ಸಿಗರು ಸೇರಿ, ಹುಬ್ಬಳ್ಳಿ–ಧಾರವಾಡ ಮಹಾನಗರ ಸಭೆಯ ಆಗಿನ ಕಮೀಶನರರ ವಿರುದ್ಧ ಅನೇಕ ಆಪಾದನೆಗಳನ್ನು ಮಾಡಿದ್ದರು. ಅರಸು ಸಿಟ್ಟಿಗೆದ್ದು ಸ್ಥಳದಲ್ಲಿಯೇ ಅವರ ವರ್ಗಾವಣೆಗೆ ಆಜ್ಞೆ ಮಾಡಿದ್ದರು.

ಮರು ದಿನ ಮುಂಜಾನೆ ವಿಜಾಪುರದ ಪ್ರವಾಸಿಮಂದಿರದಲ್ಲಿ ಅರಸು ನಮಗೆ ಸಿಕ್ಕರು. ಜಮಖಂಡಿಗೆ ಹೊರಡುವ ಅವಸರದಲ್ಲಿದ್ದರು. ನಾವು ಭೆಟ್ಟಿಯಾಗಬೇಕೆಂದಾಗ. ಅಧಿಕಾರಿಗಳ ಸಲಹೆ ಮೀರಿ, ಬರಹೇಳಿದರು. ನಾನು, 'ದಿ ಹಿಂದು' ಪತ್ರಿಕೆಯ ಮದನಮೋಹನ ಮತ್ತು ಆಗಿನ ಪಿಟಿಐ ಪ್ರತಿನಿಧಿ ಶಂಕರರಾವ್ ಸೇರಿ ಸ್ವಲ್ಪ ಸಲುಗೆಯಿಂದ ಮಾತನಾಡುತ್ತ ಆ ಕಾಂಗ್ರೆಸ್ ಕಾರ್ಯಕರ್ತರ (ಹುಬ್ಬಳ್ಳಿಯಲ್ಲಿ ಮುನಸಿಪಲ್ ಕಮೀಶನರರ ವಿರುದ್ಧ ಚಾಡಿ ಹೇಳಿದಂಥ) ಜಾತಕ ಬಿಡಿಸಿ ಹೇಳಿ, ಕಮೀಶನರರ ಕಾರ್ಯನಿಷ್ಠೆ, ಸೌಜನ್ಯ, ಹಿಂದುಳಿದವರಿಗಾಗಿ ಅವರು ಮಾಡುತ್ತಿದ್ದ ಕೆಲಸವನ್ನು ವಿವರಿಸಿ ಅವರನ್ನು ಅವಧಿಗೆ ಮುನ್ನ ಎತ್ತಬಾರದೆಂದು ಕೇಳಿಕೊಂಡೆವು.

ಎಲ್ಲವನ್ನೂ ಶಾಂತಚಿತ್ತರಾಗಿ ಕೇಳಿಕೊಂಡು

ಎದ್ದು ನಿಂತರು, "ಏನು ಸ್ವಾಮಿ, ಏನೂ ಹೇಳಲೇ ಇಲ್ಲವಲ್ಲ," ಎಂದು ನಾನು ಸ್ವಲ್ಪ ವ್ಯಗ್ರನಾಗಿಯೇ ಕೇಳಿದೆ.

"ಆಯಿತಲ್ಲಪ್ಪ, ನೀವು ಹೇಳುವುದನ್ನೆಲ್ಲ ಕೇಳಿದ್ದೇನೆ. ನನ್ನಲ್ಲಿ ನಿಮಗೆ ವಿಶ್ವಾಸವಿದೆ ತಾನೆ?" ಎಂದು ನುಡಿದು ಹೊರಟುಬಿಟ್ಟರು. ವರ್ಗಾವಣೆ ಆಜ್ಞೆ ಬೆಂಗಳೂರು ಮುಟ್ಟುವಷ್ಟರಲ್ಲಿಯೇ ರದ್ದಾಗಿತ್ತು.

ಬೆಳಗಾವಿಯಲ್ಲಿ ಸೇರಿದ್ದ (೧೯೮೦) ಕನ್ನಡ ಸಾಹಿತ್ಯ ಸಮ್ಮೇಳನದ ಮುಕ್ತಾಯ ಸಮಾರಂಭದ ಮುಖ್ಯ ಅತಿಥಿಯಾಗಿ ಬರುವ ವೇಳೆಗೆ ಅರಸು ಅಧಿಕಾರ ಕಳೆದುಕೊಂಡಿದ್ದರು. ಅವರನ್ನು ನೋಡುವ, ಅವರೊಂದಿಗೆ ಮಾತನಾಡುವ ಕುತೂಹಲ ನನಗೆ ತಡೆಯಲಾರದಷ್ಟಾಗಿತ್ತು. ಅಂದು ಮುಂಜಾನೆ ನಾವು ಪತ್ರಕರ್ತ ಸ್ನೇಹಿತರೆಲ್ಲ ಸೇರಿ ಅವರು ಇಳಿದುಕೊಂಡಿದ್ದ ಹೋಟೆಲ್ ರಾಮದೇವ್‌ಗೆ ಹೋದೆವು. ಅವರ ಕೋಣೆಯ ಹೊರಗೆ ನೂರಾರು ಜನರಿದ್ದರು.



"ಚಿನ್ನದ ಸರಾ ಬೇಕು ತಾನೆ? ಇನ್ನರ್ಧ ಗಂಟೆ ತಾಳು, ಬೆಂಗಳೂರ್ - ಬೊಂಬೈ ಬಸ್ ಬರುತ್ತೆ, ಕಂಡ್ಕೊಡ್ತೀನಿ..."

ಅರಸು ಸ್ನಾನ ಮಾಡುತ್ತಿದ್ದರು. ನಾವು ಹಜಾರದಲ್ಲಿ ಹೋಗಿ ಕುಳಿತುಕೊಂಡೆವು. ಹತ್ತು-ಹದಿನೈದು ನಿಮಿಷಗಳ ನಂತರ ಅರಸು ಎಂದಿನಂತೆ ಶುಭ್ರ ಖಾದಿಯ ಅಂಚಿನ ಧೋತರ ಉಟ್ಟು ನೆಹರೂ ಜುಬ್ಬ ಧರಿಸಿ ಹೊರಗೆ ಬಂದರು. ನಾವು ಕುಳಿತಲ್ಲಿಯೇ ಬಂದು ಕುಳಿತುಕೊಂಡು, 'ಏನು ಸಮಾಚಾರ' ಎಂದು ವಿಚಾರಿಸಿದರು.

ಮುಖದಲ್ಲಿ ಅಧಿಕಾರ ಕಳೆದುಕೊಂಡುದರ ವಿಷಾದದ ಛಾಯೆ ಇಲ್ಲವಾಗಿದ್ದರೂ ಆ ರಾಜಗಾಂಭೀರ್ಯ ಕುಂದಿ ಹೋಗಿತ್ತು. "ರಾಜಕೀಯದಲ್ಲಿ ಸೋಲು-ಗೆಲುವುಗಳಿಗೆ ಮಹತ್ವ ಇಲ್ಲ" ಎಂದರು. ಮುಂದಿನ ಯೋಜನೆಗಳ ಬಗ್ಗೆ ತಡೆದು ನೋಡಿರಿ ಎಂದರು. ಯಾವುದೋ ಒಂದು ಹಂತದಲ್ಲಿ ಅರಸು ತಮ್ಮ ಪಕ್ಷದ ಸೋಲಿಗೆ ಪತ್ರಿಕೆಗಳೂ ಕಾರಣ ಎಂದು ಕಿಡಿಕಾರಿದರು. "ನೀವು ನನ್ನ ಸಾಧನೆಗಳನ್ನು ಕುರಿತು ಬರೆಯಲಿಲ್ಲ. ಅವರು (?) ಹೇಳಿದ್ದನ್ನು ಬರೆದಿರಿ. ನಮಗೆ ನೀವು ಪ್ರಚಾರ ಕೊಡಲಿಲ್ಲ," ಎಂದು ಧ್ವನಿ ಏರಿಸಿ ನುಡಿದರು.

ನಾವು ಅವರ ಆಪಾದನೆ ನಿರಾಕರಿಸಿ, "ಯಾವ ಪತ್ರಿಕೆಯೂ ನಿಮ್ಮನ್ನು ಅಲಕ್ಷಿಸಲಿಲ್ಲ" ಎಂದಾಗ ಅವರು 'ಸುಳ್ಳು' ಎಂದು ಅರ್ಭಟಿಸಿದರು. ಆಗ ನಾನು ಎದ್ದು, "ನೀವು ಸುಳ್ಳು ಹೇಳುತ್ತೀರಿ. ಒಂದು ಪತ್ರಿಕೆಯ ಒಡೆತನವನ್ನು ನಿಮ್ಮವರ ಕೈಗೆ ಕೊಡಿಸಿ ನಿಮಗೆ ಬೇಕಾದಂತೆ ಬರೆಸಿಕೊಂಡಿರಿ. ನಮ್ಮನ್ನು ಅವರು ಕುರಿಗಳಂತೆ ಕಂಡರು," ಎಂದಾಗ ಅರಸು ಸಿಟ್ಟಿಗೆದ್ದು ಎದುರಿಗಿದ್ದ ಜನರನ್ನು ನೂಕಿಕೊಂಡು ಕೋಣೆಯಿಂದ ಹೊರಬಿದ್ದರು. ಶಾಸಕ ಹಾಗೂ ಹಿಂದಿನ ಮಂತ್ರಿ ಆರ್. ಎಸ್. ಪಾಟೀಲರು ಬಂದು, "ಹೋಗಲಿ ಬಿಡು ಮಹಾರಾಯ, ಅವರನ್ಯಾಕ ತಡವತಿ?" ಎಂದು ನನಗೆ ಸಮಾಧಾನ ಹೇಳುತ್ತಿದ್ದಂತೆ ಅರಸು ಬಿರುಗಾಳಿಯಂತೆ ನಾವು ನಿಂತಲ್ಲಿಗೆ ಮರಳಿ ಬಂದು, ನನ್ನ ಕೈ ಹಿಡಿದು ಮುಗುಳ್ನಕ್ಕರು. "ಅದೇನೇ ಇರಲಿ, ನಾವೂ ನೀವೂ ಸ್ನೇಹಿತರು ತಾನೇ?" ಎಂದು ಹೇಳುತ್ತ ಕೈಕುಲುಕಿ ಹೋದರು.

ಅಂದೇ ಸಂಜೆ ನಾನು, ಅರಸು ಅವರ ಆತ್ಮೀಯ

ಉತ್ಕೃಷ್ಟ ಭಾಷಣಗಳಲ್ಲಿ ಒಂದನ್ನು ಕೇಳಿ ಆನಂದ ಪಟ್ಟೆ. ಬರೆದು ಸಮಾಧಾನ ಪಟ್ಟೆ. ಅದಕ್ಕಿಂತ ಒಳ್ಳೆಯ, ಸಾಹಿತ್ಯ ಸಮ್ಮೇಳನದ ಮುಖ್ಯಾಯ ಭಾಷಣವನ್ನು ಆ ಸಂದರ್ಭದಲ್ಲಿ ಯಾವ ಸಾಹಿತಿಯೂ ಮಾಡಲಾರ ಎನಿಸಿತು. ಸಾಹಿತಿಗಳ ರಾಜಕಾರಣ, ಸಾಹಿತ್ಯದ ಗಂಧವಿಲ್ಲದಿದ್ದರೂ ಸಾಹಿತ್ಯದ ಬಗ್ಗೆ ಮಾತನಾಡುವ ರಾಜಕಾರಣಿಗಳನ್ನು ಕೇಳುಗರ ಕಣ್ಮುಂದೆ ಬತ್ತಲೆಯಾಗಿ ನಿಲ್ಲಿಸಿದರು. ಸಾಹಿತಿ ಹೇಗಿರಬೇಕು, ಏನು ಮಾಡಬೇಕೆಂಬುದನ್ನು ನಿಷ್ಕರ್ಷೆಮಾಡಿ ಅವನ ಗುಣಾವಗುಣಗಳನ್ನು ಬಿಚ್ಚಿ ಹೇಳಿದರು. ರಾಜಕಾರಣಿ ಸುಸಂಸ್ಕೃತನಾಗಲು ಸಾಹಿತ್ಯ ಓದಬೇಕು ಎಂದು ಹೇಳಿದ ಅರಸು ಮನೆಯಲ್ಲಿ ದೊಡ್ಡ ಗ್ರಂಥ ಸಂಗ್ರಹವೇ ಇತ್ತು.

೧೯೮೦ರ ಜುಲೈ ೨೧ ರಂದು ನವಲಗುಂದ–ನರಗುಂದದಲ್ಲಿ ನಡೆದ ರೈತ ಬಂಡಾಯ ಅರಸು ಅವರನ್ನು ಅಲ್ಲಿಗೆ ಎಳೆದು ತಂದಿತು. ನವಲಗುಂದ ಪಂಚಾಯತಿ ಕಚೇರಿಯಲ್ಲಿ ಸೇರಿದ ದೊಡ್ಡ ಜನಸಂದಣಿಯನ್ನು ಉದ್ದೇಶಿಸಿ ಮಾತನಾಡಿ ರೈತರ ಬಗ್ಗೆ ತಮ್ಮ ಕಳವಳ ವ್ಯಕ್ತಮಾಡಿದರು. ಅವರು ಹೊರಗೆ ಬರುತ್ತಿದ್ದಂತೆ ಅವರ ಅನುಯಾಯಿ ಒಬ್ಬರು ನನ್ನ ಪರಿಚಯ ಮಾಡಿಕೊಡತೊಡಗಿದರು. ಅರಸು ನನ್ನತ್ತ ನೋಡಿ ಮುಗುಳ್ನಕ್ಕು, "ನನಗೆ ಗೊತ್ತಪ್ಪ," ಎಂದರು. "ನೀರಾವರಿ ಬೇಸಾಯ ನಿಮಗೆ ಗೊತ್ತಿಲ್ಲ. ನೀವು ಆಲಸಿಗಳು ಎಂದು ಇಲ್ಲಿಯ ರೈತರನ್ನು ನೀವೇ ಟೀಕಿಸಿದ್ದಿರಿ," ಎಂದು ಮೆಲು ಧ್ವನಿಯಲ್ಲಿ ನಾನು ಅವರಿಗೆ ಹೇಳಿದೆ. "ಆ ರಾಜಕೀಯ ಈಗ ಬೇಡಪ್ಪ," ಎಂದು ಮಾತು ಮುಗಿಸಿದರು. ಹತ್ತಿರದ ಅಳಗವಾಡಿಗೆ ಹೋಗಿ ಪೋಲೀಸ್ ಗುಂಡಿಗೆ ಬಲಿಯಾಗಿದ್ದ ಯುವಕನ ಕುಟುಂಬಕ್ಕೆ ಸಾಂತ್ವನ ಹೇಳಿ ಸಾವಿರ ರೂಪಾಯಿ ಕೊಟ್ಟು ಬಂದರು.

ನಾವು ಪತ್ರಕರ್ತರು ಅರಸು ಅವರ ಮಾತುಕತೆಗಳಲ್ಲಿ, ನಡೆನುಡಿಗಳಲ್ಲಿ ಹಲವು ವಿಸಂಗತಿಗಳನ್ನು ಕಂಡಿದ್ದೇವೆ. ಅವರು ನೂರಕ್ಕೆ ನೂರು ರಾಜಕಾರಣಿ. ಆದರೆ ಅವರ ವ್ಯಕ್ತಿತ್ವದ ನಿಜವಾದ ನೆಲೆಗಟ್ಟು ಬೇರೆಯೇ ಆಗಿತ್ತು. ಅವರ ಅಂತರಾಳದಲ್ಲಿ ನಿರ್ಮಲ ಅಂತಃಕರಣ ಓತಪ್ರೋತವಾಗಿ ಹರಿದಿತ್ತು. ಅವರ ಹೃದಯವಂತಿಕೆ, ರಾಜಕಾರಣಿಯ ನಿರ್ದಯತೆಯನ್ನು ಮೀರಿ ನಿಂತು ಮೇಲಿಂದ ಮೇಲೆ ಪ್ರಕಟವಾಗುತ್ತಿತ್ತು.

ಅರಸು ಅವರ ಪತ್ರಿಕಾಗೋಷ್ಠಿಗಳಾಗಲಿ ಸಾರ್ವಜನಿಕ ಭಾಷಣಗಳಾಗಲಿ ಪತ್ರಕರ್ತರಿಗೆ ಯಾವಾಗಲೂ ದೊಡ್ಡ ಆಕರ್ಷಣೆ. ಅವರು ಏನೇ ಹೇಳಲಿ, ಅದು ಒಂದು ಸುದ್ದಿಯಾಗುವಷ್ಟು ಮಹತ್ವ ಅವರ ವ್ಯಕ್ತಿತ್ವಕ್ಕೆ ಬಂದಿತ್ತು. ಯಾವಾಗಲೂ ಅವರು ಏನಾದರೂ ಹೊಸ ವಿಷಯ ಹೇಳಿಯೇ ಹೇಳುತ್ತಿದ್ದರು. ಪ್ರಶ್ನೆಗಳಿಗೆ ಅವರಲ್ಲಿ ಉತ್ತರ ಯಾವಾಗಲೂ ಸಿದ್ಧ. ಆತಂಕಕಾರಿ ಪ್ರಶ್ನೆಗಳು ಬಂದರೆ ಸಿಡಿಮಿಡಿಗೊಳ್ಳುತ್ತಿದ್ದರು. ಆದರೆ ಉತ್ತರಿಸಲು ನಿರಾಕರಿಸುತ್ತಿರಲಿಲ್ಲ. ಎಷ್ಟೋ ಸಂದರ್ಭಗಳಲ್ಲಿ ಅವರ ಉತ್ತರಗಳು ಮನದಟ್ಟು ಮಾಡಿಕೊಡುವಂಥವುಗಳಾಗಿರುತ್ತಿರಲಿಲ್ಲ. ಆದರೆ ಅವುಗಳಲ್ಲಿಯ ಪ್ರಾಮಾಣಿಕತೆ, ನಿರಂತರ ಆಶಾವಾದ ಪ್ರಶ್ನಾತೀತ.

ಅರಸು ಯಾವ ಪ್ರಶ್ನೆಯನ್ನೂ ಉತ್ತರಿಸದೇ ಹೋಗಿಲ್ಲ. ಆದರೆ ಸದಾ ಸುದ್ದಿಯಾಗಿ ಬಲ್ಲ ಇನ್ನೊಬ್ಬ ಅರಸು ಸಿಕ್ಕಾನೆಯೇ? ✫

---

ಊಟ ತರುವ ಹುಡುಗ ಅಂದು ಊಟದ ಜತೆಗೆ ಇಂಗ್ಲಿಷ್ ವರ್ತಮಾನಪತ್ರವನ್ನೂ ತಂದ.

ಸಾಹೇಬರಿಗೆ ಆಶ್ಚರ್ಯವಾಯಿತು.

ಯಾಕೆಂದು ವಿಚಾರಿಸಿದಾಗ ಹುಡುಗ ಹೇಳಿದ: "ಅಮ್ಮಾವ್ರಿಗೆ ನಿಮ್ಮ ಜೊತೆ ಬಹಳ ಮಾತಾಡೋದಿದೆಯಂತೆ. ಈ ಪೇಪರ್ರ ಆಫೀಸಲ್ಲೇ ಓದಿ ಮುಗ್ಸಿ ಬೇಗ ಮನೇಗ ಬರೇಕಂತೆ."

—ಹೇಮಾಶ್ರೀ

ಕನ್ನಡಕ್ಕಾಗಿ ಕರ್ನಾಟಕದಲ್ಲೇ
ಚಳವಳಿ ಮಾಡಬೇಕು!

# ಕನ್ನಡ ಕಾಸಿಗೆ ಎಷ್ಟು ಕೇಜಿ?

**ಬದರೀನಾಥ**

ಧಾರವಾಡದಿಂದ ಬಂದ ಒಂದು ಸುದ್ದಿ ಕನ್ನಡಿಗರ ಸ್ವಾಭಿಮಾನದ ಆಳಕ್ಕೆ ಕನ್ನಡಿ ಹಿಡಿದು ತೋರುವಂತಿದೆ. ಕೇಂದ್ರ ಕನ್ನಡ ಕ್ರಿಯಾ ಸಮಿತಿಯ ಕೆಲವು ಉತ್ಸಾಹಿ ಸದಸ್ಯರು ಇಂಗ್ಲಿಷ್ ಬೋರ್ಡುಗಳನ್ನು ತೂಗುಹಾಕಿದ್ದ ಕೆಲವು ಅಂಗಡಿಗಳಿಗೆ ಹೋಗಿ ಅವುಗಳನ್ನು ಕಿತ್ತುಹಾಕಿ ಕನ್ನಡ ನಾಮಫಲಕಗಳನ್ನು ಬರೆಸಿ ಹಾಕಬೇಕೆಂದು ಒತ್ತಾಯಿಸಿದಾಗ, "ನೀವು ಬೇಕಾದರ ನಿಮ್ಮ ಪೇಂಟರನ್ನು ಕರಕೊಂಡು ಬಂದು ಬರಸ್ರಿ" ಎಂದೊಬ್ಬರು ಹೇಳಿದರಂತೆ. "ದೀಪಾವಳಿ ಮುಂದ ನಾವು ಹೊಸಾ ಬೋರ್ಡ್ ಬರಸ್ತೇವಿ, ಆವಾಗ ನೀವು ಹೇಳಿದ್ಹಾಂಗ ಕನ್ನಡದಾಗ ಬರಸೋಣಂತ" ಎಂದು ಇನ್ನೊಬ್ಬರು. "ಅಲ್ರೀ, ಕನ್ನಡ ಸಾಲೀ ಬಂದ್ ಮಾಡಸ್ತೀರಿ, ಉರ್ದು ಸಾಲೀ ಬಂದ್ ಮಾಡಿಸ್ರಿ, ಇಂಗ್ಲಿಷ್ ಸಾಲೀ ಬಂದ್ ಮಾಡಸ್ರಿ; ಅದ್ಯಾಕ ಆಗಾಂಗಿಲ್ಲ? ಅಂದ್ಹಾಂಗೆ ನಿಮ್ಮ ಮಕ್ಕಳು ಇಂಗ್ಲಿಷ್ ಸಾಲಿಗೆ ಹೋಗ್ತಾವಲ್ಲ!" ಎಂದು ಮತ್ತ್ಯಾರೋ ರಾಗವೆಳೆದರು. "ಇದು ನಮ್ಮ ಅಂಗಡಿ, ನಮ್ಮ ವ್ಯಾಪಾರ. ನಿಮಗ ಬೇಕಾದರ ಬಂದು ವ್ಯಾಪಾರ ಮಾಡಬಹುದು, ಬ್ಯಾಡಾದ್ರ ಹೋಗಬಹುದು. ನಮಗ ಬೇಕೆನಿಸಿದಾಗ ಬೋರ್ಡ್ ಬದ್ಲಾಯಿಸ್ತೇವಿ", ಎಂದೂ ಒಬ್ಬರು ದಬಾಯಿಸಿದಾಗ ಕ್ರಿಯಾ ಸಮಿತಿಯವರು ಇಂಗ್ಲಿಷ್ ನಾಮಫಲಕವನ್ನು ಕಿತ್ತೆಸೆಯುವುದಾಗಿ ಅಬ್ಬರಿಸಿದರಂತೆ. "ಅದಕ್ಕ ಕೈ ಹಚ್ಚರಿ ನೋಡೋಣ, ಪ್ಯಾಟ್ಯಾಗಿನ ಎಲ್ಲಬ್ಯ ಸಡ್ಲಾದಾವು…"

ಕನ್ನಡದ ಗಂಡು ಮೆಟ್ಟಿನ ಸ್ಥಳವೆನಿಸಿದ ಧಾರವಾಡದಲ್ಲಿಯೇ ಕನ್ನಡದ ಬಗ್ಗೆ ಇಷ್ಟೊಂದು ಅಭಿಮಾನದ ಅಭಾವ ಕಂಡುಬರುತ್ತಿದೆಯಲ್ಲ! ಇದು ನುಡಿಯ ಮತ್ತು ನಾಡಿನ ಭವಿತವ್ಯದ ದೃಷ್ಟಿಯಿಂದ ನೋಡಿದಾಗ ಹಿತಕರ ಬೆಳವಣಿಗೆಯೆಂದೇನೂ ಅನ್ನಿಸುವುದಿಲ್ಲ. ಇದು ದಿ. ಶ್ರೀಪ್ರಕಾಶರ ಮಾತನ್ನೇ ನೆನಪಿಗೆ ತರುತ್ತದೆ. ಗಾಂಧೀಜಿಯ ಅಸಹಕಾರದ ಕರೆಗೆ ಓಗೊಟ್ಟು ಶ್ರೀಪ್ರಕಾಶ ಮತ್ತು ಅವರಂತೆಯೇ ಸಾವಿರಾರು ಜನ ತಂತಮ್ಮ ಮಕ್ಕಳನ್ನು ಶಾಲೆ ಬಿಡಿಸಿಬಿಟ್ಟರು. ಆದರೆ ನೆಹರೂ ಕುಟುಂಬದ ಮಕ್ಕಳು ಸ್ವಿಟ್ಜರ್ಲೆಂಡಿನಲ್ಲೋ ಇಂಗ್ಲೆಂಡಿನಲ್ಲೋ ಇದ್ದು ತಮ್ಮ ಶಿಕ್ಷಣ ಪೂರೈಸಿದರು. ಆರ್. ಕೆ. ನೆಹರೂ, ಬಿ. ಕೆ. ನೆಹರೂರಂಥವರು ಐ.ಸಿ.ಎಸ್. ಮಾಡಿಕೊಂಡು ಬ್ರಿಟಿಶ್ ಸರಕಾರದ ಸೇವೆಯನ್ನು ಮಾಡಿದರು. ಸ್ವಾತಂತ್ರ್ಯಾನಂತರವೂ ಉನ್ನತ ಅಧಿಕಾರದ ಸ್ಥಾನಗಳು ಅವರನ್ನು ಅರಸಿಕೊಂಡೇ ಬಂದವು. ಶ್ರೀಪ್ರಕಾಶರ ಮಾತಿನಲ್ಲೇ ಹೇಳುವುದಾದರೆ, they got the best of both the worlds — ಆ ಲೋಕ, ಈ ಲೋಕ ಎರಡರಲ್ಲೂ ಅವರು ಚೊಚ್ಚಲು ಮಕ್ಕಳಾಗಿಯೇ ಮೆರೆದರು. ಕ್ರಿಯಾ ಸಮಿತಿಯ ಕೆಲವರಾದರೂ

ಪ್ರಮುಖ ಧುರೀಣರಿಗೆ ಈ ಮಾತು ಖಂಡಿತ ಅನ್ವಯಿಸುತ್ತದೆಂದು ಹೇಳುವುದು ಅನಿವಾರ್ಯವಾಗುತ್ತದೆ. ಅವರ ಮಕ್ಕಳು, ಮೊಮ್ಮಕ್ಕಳು ಇಂಗ್ಲಿಷ್ ಮಾಧ್ಯಮದ ಶಾಲೆಗಳಿಗೆ ಹೋಗುತ್ತಾರಂತೆ. ಕನ್ನಡದ ಅಭಿಮಾನ ಎಷ್ಟಿದ್ದರೇನಾಯಿತು, ಬಾಹ್ಯ ಜಗತ್ತಿನ ವೈಯಕ್ತಿಕ ವಾಸ್ತವಾಭ್ಯುದಯ ಅವರಿಂದ ಎಷ್ಟು ಮಟ್ಟಿಗೆ ಅಪೇಕ್ಷೆಯನ್ನು ಈ ಧುರೀಣರು ಮೊದಲೇ ಲೆಕ್ಕ ಹಾಕಿಟ್ಟುಕೊಂಡಿರಬೇಕು. ಯಾರಾದರೂ ತುಸು ಒತ್ತಿ ಕೇಳಿದರೆ ಮಕ್ಕಳ ಭವಿತವ್ಯದ ಬಗ್ಗೆ ನಿರ್ಣಯ ಕೈಕೊಳ್ಳುವ ಹಕ್ಕು ನಮಗೆಲ್ಲಿಯದು ಎಂದು ಅವರು ಕೇಳಿದರೂ ಕೇಳಬಹುದು.

ಪ್ರಶ್ನಾರ್ಹ ಚಾರಿತ್ರ್ಯವುಳ್ಳವರ ಕೈಗೆ ಸಿಕ್ಕು ಒಂದು ಶ್ರೇಷ್ಠ ಉದ್ದೇಶವನ್ನು ಈಡೇರಿಸಬೇಕಾದ ಆಂದೋಲನ ಕೆಲವರ ಬಾಯಿ ಚಪಲಕ್ಕೆ ಆಹಾರವಾಗಿ ಪರಿಣಮಿಸುತ್ತಿರುವುದು ಕನ್ನಡದ ದುರ್ದೈವ.

ಗೋಕಾಕ ವರದಿ ಇದ್ದಕ್ಕಿದ್ದಂತೆ ಜಾರಿಗೆ ಬರಲೇಬೇಕೆಂದು ಪಟ್ಟುಹಿಡಿದು ಆಂದೋಲನದ ಮೊದಲ ಕಹಳೆಯನ್ನೂದಿದ್ದು ಧಾರವಾಡದಲ್ಲಿ. ಆದರೆ ಪ್ರಾರಂಭದಿಂದಲೇ ಕನ್ನಡವೆಂಬುದು ಭಾಷೋದ್ರೇಕಕ್ಕೆ ವಸ್ತುವಾಗಿ ಪರಿಣಮಿಸಿತಷ್ಟೇ ಹೊರತು ಗೋಕಾಕ ಸಮಿತಿ ವಸ್ತುತಃ ನೇಮಿಸಲ್ಪಟ್ಟದ್ದು ಯಾತಕ್ಕಾಗಿ ಮತ್ತು ಅದು ಮಾಡಿದ ಶಿಫಾರಸುಗಳು ಏನು ಮತ್ತು ಅವುಗಳಿಂದ ನಿರೀಕ್ಷಿತ ಪರಿಣಾಮಗಳೇನು ಎಂಬುದರ ಬಗ್ಗೆ ಸಾರ್ವಜನಿಕರಲ್ಲಿ ಸ್ಪಷ್ಟ ತಿಳುವಳಿಕೆಯನ್ನು ಮೂಡಿಸುವುದು ಕ್ರಿಯಾಸಮಿತಿಯ ಪ್ರಥಮ ಕರ್ತವ್ಯವಾಗಿತ್ತು. ಆದರ ಬದಲು ಇಡೀ ಆಂದೋಲನವನ್ನು ಕೇವಲ ವಿಶಿಷ್ಟ ವ್ಯಕ್ತಿಗಳನ್ನು ಮತ್ತು ಅವರ ಜಾತಿಯನ್ನು ಹೀಗಳೆಯುವುದಕ್ಕೆಂಬಂತೆ ಬಳಸಿಕೊಂಡದ್ದರಿಂದ ಮತ್ತು ಸಾಮಾನ್ಯ ಜನಕ್ಕೆ ಅತ್ಯಗತ್ಯವಾದ ಹೋರಾಟದ ಸ್ಪಷ್ಟ ಕಾರ್ಯಕ್ರಮವನ್ನು ನೀಡಲು ಸಹ ಸಮಿತಿ ಅಸಮರ್ಥವಾದದ್ದರಿಂದ ಧುರೀಣರು ಮುಖ ಉಳಿಸಿಕೊಳ್ಳುವುದಕ್ಕೇ ಪರದಾಡಬೇಕಾಯಿತು.

ಗೋಕಾಕ ಸಮಿತಿಯು ಪರಿಶೀಲನೆಗೆ ಸರಕಾರ ಒಪ್ಪಿಸಿದ್ದು ಮೂರು ವಿಷಯಗಳನ್ನು : (೧) ಶಾಲಾ ಪಠ್ಯಕ್ರಮದಲ್ಲಿ ಸಂಸ್ಕೃತ ಇರುವುದು ಸೂಕ್ತವೆ?

೨) ಶಾಲಾ ಪಠ್ಯಕ್ರಮದಲ್ಲಿ ಸಂಸ್ಕೃತ ಇರುವುದಾದರೆ ಕನ್ನಡಕ್ಕೆ ಬದಲಿ ಭಾಷೆಯಾಗದಂತೆ ಇರುವುದು ಹೇಗೆ?

(೩) ತ್ರಿಭಾಷಾ ಸೂತ್ರದಂತೆ ಕನ್ನಡವನ್ನು ಪ್ರಥಮ ಕಡ್ಡಾಯ ಭಾಷೆಯನ್ನಾಗಿ ಮಾಡಿ ಉಳಿದೆರಡು ಭಾಷೆಗಳನ್ನು ವಿದ್ಯಾರ್ಥಿಗಳ ಇಚ್ಛೆಗೆ ಬಿಡುವುದು ಯೋಗ್ಯವೆ?

ಆದರೆ ಗೋಕಾಕ ಸಮಿತಿಯನ್ನು ಸಂಸ್ಕೃತವನ್ನು ಕನ್ನಡಕ್ಕೆ ಬದಲಿ ಪ್ರಥಮ ಭಾಷೆಯನ್ನಾಗಿ ಮಾಡುವ ಉದ್ದೇಶದಿಂದ ನೇಮಿಸಲಾಗಿತ್ತೆಂದೂ ಉತ್ತರ ಕರ್ನಾಟಕದ ಪ್ರಮುಖ ನಗರಗಳಲ್ಲಿ ಅದಕ್ಕೆ ಬಹಿಷ್ಕಾರ ಹಾಕುವುದರ ಮೂಲಕ ಬಂದ ಒತ್ತಡವನ್ನು ತಡೆಯಲಾಗದೆ ಸಮಿತಿಯು ಕನ್ನಡವನ್ನು ಏಕೈಕ ಪ್ರಥಮ ಭಾಷೆಯೆಂದು ಘೋಷಿಸಿತೆಂದೂ ಆಂದೋಲನದ ಕೆಲವರು ಧುರೀಣರು ಹೇಳುತ್ತ ನಡೆದಿದ್ದಾರೆ. ಅಲ್ಲದೆ ಪರ್ಯಾಯವಾಗಿ, ಬಹುಸಂಖ್ಯಾಕರ ಮೇಲೆ ಸಂಸ್ಕೃತವನ್ನು ಹೇರಲು ಒಬ್ಬ ಸ್ವಾಮಿಗಳು ಮತ್ತು ಅವರ ಕೋಮಿನ ಕೆಲವರು ಒಳಸಂಚು ನಡೆಸಿದ್ದಾರೆಂಬ ಅಪಾದನೆಯನ್ನು ಅನೇಕರು ಮಾಡಿ ವಾತಾವರಣದಲ್ಲಿರುವ ಘನತೆಯನ್ನು ಗಾಳಿಗೆ ತೂರಿದ್ದಾರೆ.



ಆಂದೋಲನದ ಮಾತಂತಿರಲಿ, ನಮ್ಮ ಈ ಘನ ರಾಜ್ಯವನ್ನು ಕರ್ನಾಟಕವೆಂದು ಕರೆಯಲು ನಮಗೆ ರಾಜ್ಯೋದಯದ ನಂತರ ಎಷ್ಟು ವರ್ಷಗಳು ಹಿಡಿದವೆಂಬುದನ್ನು ನೋಡಬೇಕು. (ನಂತರ ರಾಜ್ಯಕ್ಕೆ ಕರ್ನಾಟಕವೆಂದು ನಾಮಕರಣ ಮಾಡಲು ನಿರ್ಧರಿಸಿದ ದಿ. ದೇವರಾಜ ಅರಸರೇ ಒಂದು ಕಾಲಕ್ಕೆ 'ಕರ್ನಾಟಕ' ಹೆಸರಿನ ತೀವ್ರ ವಿರೋಧಿಯಾಗಿದ್ದರೆಂಬುದೂ ಒಂದು ಮರೆಯಲಾಗದ ಸತ್ಯ.) ರಾಜ್ಯದ ಹೆಸರು ಬದಲಾದದ್ದು ಕೂಡ ಅದರಿಂದ ದೊರೆಯಬಹುದಾದ ಪ್ರಯೋಜನಗಳನ್ನು ಗಿಟ್ಟಿಸಿಕೊಳ್ಳುವುದಕ್ಕೆಂಬುದು ಸರ್ವಶ್ರುತ. ಇಲ್ಲವಾದಲ್ಲಿ ಸುತ್ತಲೂ ಗಡಿ ಪ್ರದೇಶಗಳಲ್ಲಿ ರಾಜ್ಯೋದಯದ ಬೆಳ್ಳಿಹಬ್ಬವನ್ನು ಆಚರಿಸಿದ ನಂತರವೂ, ಕನ್ನಡ ಯಾರದೋ ಭಾಷೆಯಾಗಿಯೇ ಕೇಳಿ ಬರುತ್ತಿದೆಯೇ ಹೊರತು ನಾನು ಕನ್ನಡ, ಕನ್ನಡ ನನ್ನದು ಎಂದು ಅಭಿಮಾನಂದ ಎದೆ ತಟ್ಟಿ ಹೇಳುವಂತಹ ವಾತಾವರಣ ಅಲ್ಲೆಲ್ಲೂ ಕಂಡುಬರುತ್ತಿಲ್ಲ. ತದ್ವಿರುದ್ಧ ಕನ್ನಡದ ಅಭಿಮಾನವೆಂದರೆ ದುರಭಿಮಾನವೇ ಸರಿಯೆಂದು ಹೇಳುವಂತಹ ಕನ್ನಡಿಗರು ಬೇಕಾದಷ್ಟಿದ್ದಾರೆ. ಕನ್ನಡಿಗರು ಎಲ್ಲೇ ಹೋದರೂ ಅಲ್ಲಿಯ ಭಾಷೆಯನ್ನು ಸುಲಭವಾಗಿ ಕಲಿತು ಅದನ್ನು ತಮ್ಮದಾಗಿ ಮಾಡಿಕೊಂಡುಬಿಡುತ್ತಾರೆಂದು ಅನೇಕರಿಗೆ ಅಭಿಮಾನ. ಆದರೆ ಅವರ ಈ ಗುಣ ಎಲ್ಲಿಗೆ ಮುಟ್ಟಿದೆಯೆಂದರೆ ಅವರು ಬಲು ಬೇಗನೆ ತಮ್ಮ ತಾಯ್ನುಡಿ ಕನ್ನಡವೆಂಬುದನ್ನೇ ಮರೆತುಬಿಡುತ್ತಾರೆ. ಮರಾಠಿಗರು, ತಮಿಳರು, ಬಂಗಾಲಿಗಳು ಎಲ್ಲಿದ್ದರೂ, ತಮ್ಮತನವನ್ನುಳಿಸಿಕೊಳ್ಳುವುದರಲ್ಲಿಯೇ ಅಭಿಮಾನ ತಳೆಯುತ್ತಾರೆ.

ನಮ್ಮ ಸುತ್ತಲಿನ ರಾಜ್ಯಗಳವರು ತಂತಮ್ಮ ರಾಜ್ಯಗಳಲ್ಲಿ ತಂತಮ್ಮ ರಾಜ್ಯಭಾಷೆಯನ್ನು 'ಇದು ಏಕೈಕ ಪ್ರಥಮ ಭಾಷೆ'ಯೆಂದು ಘೋಷಿಸದೆಯೇ ಅಂಥ ಪರಿಸ್ಥಿತಿಯನ್ನು ಯಶಸ್ವಿಯಾಗಿ ನಿರ್ಮಾಣ ಮಾಡಿದ್ದಾರೆ. ಮದ್ರಾಸಿಗೆ ಹೋದರೆ ತಮಿಳು ನಾಮಫಲಕವನ್ನುಳಿದು ಬೇರೇನೂ ನಿಮ್ಮ ಕಣ್ಣಿಗೆ ಬೀಳದಿದ್ದರೆ ಆಶ್ಚರ್ಯವಿಲ್ಲ. ಮುಸ್ಲಿಂ ಮುಖ್ಯಮಂತ್ರಿ ಅಂತುಲೆಯವರೇ ತಾವು ಅಧಿಕಾರದಲ್ಲಿದ್ದಾಗ ಮುಂಬಯಿಯಲ್ಲಿರುವ ಪ್ರತಿಯೊಂದು ನಾಮಫಲಕವೂ ಮರಾಠಿಯಲ್ಲಿಯೇ ಇರಬೇಕೆಂದು ಆಜ್ಞೆ ಹೊರಡಿಸಿದರು. ಬಂಗಾಲದ ಮುಸಲ್ಮಾನರು ಬಂಗಾಲಿ ಹಾಗೂ ಕೇರಳದ ಮುಸಲ್ಮಾನರು ಮಲೆಯಾಳಿ ತಮ್ಮ ಮಾತೃಭಾಷೆಯೆಂದು ಭಾವಿಸುವವರಾದರೆ ನಮ್ಮ ಮುಸಲ್ಮಾನರಿಗೆ ಮಾತ್ರ ಇನ್ನೂ ಉರ್ದುವೇ ತಾಯ್ನುಡಿ. ಅದೇ ತಮ್ಮ ಮಾತೃಭಾಷೆಯೆಂದು ಅವರು ಹೇಳಿಕೊಳ್ಳುವುದಾದರೆ ಅದನ್ನು ಯಾರೂ ಪ್ರಶ್ನಿಸಲಾರರು; ಆದರೆ ರಾಜ್ಯಭಾಷೆಯಾದ ಕನ್ನಡದ ಬಗ್ಗೆ ಗೌರವ ಭಾವನೆಯನ್ನು ಮೂಡಿಸುವಲ್ಲಿ ನಾವು ವಿಫಲರಾಗಿದ್ದೇವಲ್ಲ ಎಂಬುದೇ ಮುಖ್ಯ ಸಮಸ್ಯೆ.

ನಾವು ಒಂದು ಘನ ಉದ್ದೇಶಕ್ಕಾಗಿ ಆರಂಭಿಸಿದ ಆಂದೋಲನ ಬೇರೆ ಬೇರೆ ಹಿತಾಸಕ್ತಿಗಳಿಗೆ ಬಲಿಯಾಗಿ ಹಳಿ ತಪ್ಪಿದರೆ ಅದರಿಂದ ತುಂಬಲಾರದ ನಷ್ಟವಾಗುವುದು, ಕನ್ನಡಕ್ಕೆ ಕರ್ನಾಟಕಕ್ಕೆ.

ಅಲ್ಪಸಂಖ್ಯಾತರಿಗೆ ಅವರವರ ಮಾತೃಭಾಷೆಯಲ್ಲಿ ಶಿಕ್ಷಣ ಪಡೆಯುವ ಹಕ್ಕನ್ನು ಸಂವಿಧಾನ ನೀಡಿರುವಾಗ ಆ ಹಕ್ಕಿಗೆ ವ್ಯತಿರಿಕ್ತವಾಗದಂತಹ ಅಂಶಗಳು ಸರಕಾರದ ನೀತಿಯಲ್ಲಿರುವಂತೆ ನೋಡಿಕೊಳ್ಳುವುದು ವ್ಯಾವಹಾರಿಕವಾಗಿ ಅಗತ್ಯವೇ ಆಗಬಹುದು. ಯಾಕೆಂದರೆ, ಒಣ ಅಭಿಮಾನಕ್ಕೆ ಕಟ್ಟುಬಿದ್ದು ಮಾಡಿದ್ದನ್ನು ಮುಂದೆ ನ್ಯಾಯಾಲಯ ಕಿತ್ತುಹಾಕಬಹುದು. ಗೋಕಾಕ ಸಮಿತಿಯ ಶಿಫಾರಸುಗಳ ಬಗ್ಗೆ ಸರಕಾರ ಈ ಅಂಶವನ್ನು ಗಮನದಲ್ಲಿಟ್ಟುಕೊಂಡು ನಿರ್ಣಯ ಕೈಕೊಳ್ಳಬೇಕಾದದ್ದು ನ್ಯಾಯವಾಗಿದೆ. ಆದರೆ ಕನ್ನಡ ಉಳಿದು ಬೆಳೆಯಬೇಕಾದರೆ ಕನ್ನಡಿಗರಲ್ಲಿ ಸ್ವೇಚ್ಛಾನುಸಂಧಾನ ನಿರ್ಮೂಲನಗೊಳ್ಳಬೇಕು. ಅಭಿಮಾನ ತೋರಿಕೆಯದಾಗದೆ ಅಂತಃಕರಣದಿಂದಲೇ ಉಕ್ಕಿಬರಬೇಕು. ಕನ್ನಡ ತಲೆಯೆತ್ತಿ ನಿಂತರೆ ನಾವು ಎದೆಯುಬ್ಬಿಸಿ ನಡೆಯಬಹುದು. ಆದರೆ ದುರ್ದೈವದಿಂದ ನಾವಿಂದು ಕನ್ನಡವನ್ನು ಕೆಲವರ ಚಾರಿತ್ರ್ಯವಧೆಗೆ ಸಾಧನವನ್ನಾಗಿ ಮಾತ್ರ ಬಳಸುತ್ತಿದ್ದೇವೆ, ತಾಯ್ನುಡಿಯ ತೂಕವನ್ನು ಕೇಜಿ ಲೆಕ್ಕದಲ್ಲಿ ಅಳೆಯುತ್ತಿದ್ದೇವೆ! ★

# ಡಾ. ಶ್ರೀನಿವಾಸ ಕೌಲಗುಡ್ಡ



**ವಸಂತಿ ಚಂದ್ರ**

ಎಲ್ಲರೂ ಬಾಳುವಂತೆ ಬಾಳಬೇಕು, ಎಲ್ಲರೂ ಮಾಡುವಂತೆ ಮಾಡಬೇಕು. ಕಾಲಕ್ಕೆ ತಕ್ಕ ಹಾಗೆ ಬದಲಾಗದಿದ್ದರೆ ಜನರು ನಮ್ಮನ್ನು ಹುಚ್ಚ ಎನ್ನುತ್ತಾರೆ, ಎಂದು ಅನೇಕರು ನನಗೆ ಉಪದೇಶ ಮಾಡಿದರು. ಕೆಲವರು ಇನ್ನೂ ಮಾಡುತ್ತಲೇ ಇದ್ದಾರೆ. ಆದರೆ ನನಗಿದರಲ್ಲಿ ಹುಚ್ಚಿನ ಅರ್ಥವೇನೂ ಕಾಣಿಸುವುದಿಲ್ಲ. ಹೀಗೆ ಕಾಲಕ್ಕೆ ತಕ್ಕ ಹಾಗೆ ಬದಲಾಗಲಾರದ್ದರಿಂದ ಅನೇಕ ಸಮಸ್ಯೆಗಳನ್ನೆದುರಿಸಿ ಕೆಲವೊಮ್ಮೆ ಬಹಳವಾಗಿ ನೊಂದುಕೊಂಡಿದ್ದೇನೆ, ಕಷ್ಟಕ್ಕೊಳಗಾಗಿದ್ದೇನೆ, ಎಷ್ಟೋ ಅವಕಾಶಗಳನ್ನು ಕಳೆದುಕೊಂಡಿದ್ದೇನೆ. ಇವುಗಳ ಪರಿಣಾಮ ಕೂಡ ಕಾಲಕ್ಕೆ ತಕ್ಕ ಹಾಗೆ ನನ್ನನ್ನು ಬದಲಾಯಿ

ಸುವುದರಲ್ಲಿ ಯಶಸ್ವಿಯಾಗಲಿಲ್ಲ. ನಿಜವಾಗಿ ಎಂದರೆ ಮಾನವನು ಬದಲಾಗುವುದಲ್ಲದೆ ಕಾಲ ಎಂದೂ ಬದಲಾಗುವುದಿಲ್ಲ. ಈ ದೃಷ್ಟಿಯಲ್ಲಿ ಜನರು ನನ್ನನ್ನು ಹುಚ್ಚ ಎನ್ನುವುದಾದರೆ ನನಗೆ ಸಂತೋಷವೇ."

ಇದು ದ್ವಾಪರಯುಗದ ಅಥವಾ ತ್ರೇತಾ ಯುಗದ ಆದರ್ಶವಾದಿಯ ಮಾತಲ್ಲ. ಕಲಿಯುಗದ ಸಂದ ದಿನಗಳ ಆದರ್ಶವಾದಿಯದೂ ಅಲ್ಲ. ಭಾರತದ ಈ ಪುಣ್ಯಭೂಮಿಯಲ್ಲಿ ಇಂದಿಗೂ ಇಂಥ ಆದರ್ಶವಾದಿಗಳು ದಿಕ್ಕುಗಳಿಗೊಬ್ಬರಂತಾದರೂ ಸಿಗುವುದು ಅಸಾಧ್ಯವೇನೂ ಅಲ್ಲ. ಅಂಥವರಲ್ಲೊಬ್ಬರು ಡಾ. ಶ್ರೀನಿವಾಸ ಎನ್. ಕೌಲಗುಡ್ಡ. ಮೇಲಿನ ಮಾತುಗಳು ಅವರ ಶ್ರೀಮಂತ ಪ್ರಜ್ಞೆಯ ಧೀಮಂತ ವ್ಯಕ್ತಿತ್ವದ ಗುಣಸಾಗರದ ಮಥನದಿಂದ ಹುಟ್ಟಿ ಬಂದ ಅಮೃತದ ಬಿಂದುಗಳು. ಹಿತವಾಗಿ ಮಿತವಾಗಿ ಆಡುವ ಇವರ ಒಂದೊಂದು ಮಾತು ಕೂಡ ಇಂದಿನ ಜನರಿಗೆ ಮಾರ್ಗದರ್ಶನ ಮಾಡುವಂಥದ್ದು.

ಕರುಣೆ, ಪ್ರೀತಿ ಹಾಗೂ ಮಾನವೀಯತೆಯ ಇನ್ನೊಂದು ಹೆಸರೇ ಡಾ. ಶ್ರೀನಿವಾಸ ಎನ್. ಕೌಲಗುಡ್ಡ. ಶಿಸ್ತು ಸಂಯಮ ಇವರ ಉಸಿರು. ಹುಬ್ಬಳ್ಳಿಯ ಕರ್ನಾಟಕ ಮೆಡಿಕಲ್ ಕಾಲೇಜಿನ ಸ್ತ್ರೀರೋಗಶಾಸ್ತ್ರ ವಿಭಾಗದ ಮುಖ್ಯಸ್ಥರೂ ಸ್ನಾತಕೋತ್ತರ ವಿದ್ಯಾರ್ಥಿಗಳ ಗುರುಗಳೂ ಆಗಿರುವ ಪ್ರೊ. ಶ್ರೀನಿವಾಸ ಅಚ್ಚ ಕನ್ನಡಿಗರು. ಭಾರತದಲ್ಲಿ ಕೇಳಿ ಬರುತ್ತಿರುವ ಕೆಲವೇ ಮಂದಿ ಪ್ರಸಿದ್ಧ ಸ್ತ್ರೀರೋಗಶಾಸ್ತ್ರಜ್ಞರಲ್ಲಿ ಇವರೂ ಒಬ್ಬರಾಗಿರುವುದು ಕರ್ನಾಟಕಕ್ಕೆ ಹೆಮ್ಮೆಯ ವಿಷಯ. ಕರ್ನಾಟಕಕ್ಕಾಗಲೀ ಭಾರತಕ್ಕಾಗಲಿ ವೈದ್ಯರ ಕೊರತೆಯಿಲ್ಲ. ಆದರೆ ಇವರಂಥ ವಿಶಿಷ್ಟ ಮಾನವೀಯ ಅನುಕಂಪದ ವೈದ್ಯರ ಕೊರತೆ ಹೇಳಲಾರದಷ್ಟಿದೆ.

ಇವರ ತಂದೆ ಡಾ. ಎನ್. ವಿ. ಕೌಲಗುಡ್ಡ ಅವರು ನರಗುಂದದ ನಗರಸಭೆಯ ಆಸ್ಪತ್ರೆಯಲ್ಲಿ ಹೆಸರಾಂತ ವೈದ್ಯರಾಗಿದ್ದರು. ಅಂದು ಇವರಂತೆ ಸೇವೆಯಿಂದ ಜನಮನವನ್ನು ಗೆದ್ದುಕೊಂಡ ವೈದ್ಯರು ನರಗುಂದದಲ್ಲಿ ಬೇರಾರೂ ಇರಲಿಲ್ಲ.

"ನನ್ನ ತಂದೆ – ತಾಯಿಗಳು ಆದರ್ಶವಾದಿಗಳು ಅವರು ಸೇವೆಯಿಂದ ಹೆಸರು ಗಳಿಸಿದರೆ ವಿನಾ ಹಣ ಗಳಿಸಲಿಲ್ಲ. ಯಾವುದೇ ಅನುಕೂಲತೆಗಳಿಲ್ಲದಿದ್ದ ಆ ದಿನಗಳಲ್ಲಿ ಅವರೊಬ್ಬರೇ (ತಂದೆ) ಯಶಸ್ವಿಯಾಗಿ ಶಸ್ತ್ರಚಿಕಿತ್ಸೆಯನ್ನು ಮಾಡುತ್ತಿದ್ದರು. ಈಗ ಅವರು ಇರುವದೇ ಆಗಿದ್ದರೆ ಇನ್ನೆಂಥ ಸಾಧನೆಯನ್ನು ಮಾಡುತ್ತಿದ್ದರೋ ಏನೋ ! ಆದರೆ ಬೇಗನೇ ತೀರಿಕೊಂಡರು. ಸಹಜವಾಗಿ ಎಲ್ಲ ಹೊಣೆ ನನ್ನ ಪಾಲಿಗೆ ಬಂತು," ಎನ್ನುತ್ತಾರೆ ಈ ಹಿರಿಯ ಪುತ್ರ.

ಡಾ. ಶ್ರೀನಿವಾಸರು ಪುಣೆಯ ವೈದ್ಯಕೀಯ ಕಾಲೇಜಿನಲ್ಲಿ ತಮ್ಮ ವಿದ್ಯಾಭ್ಯಾಸವನ್ನು ಮುಗಿಸಿದರು. ಆ ದಿನಗಳಲ್ಲಿ ಕೆಲಸದ ಆವಶ್ಯಕತೆಯೂ ಹೆಚ್ಚಾಗಿತ್ತು. ಪ್ರಥಮ ಶ್ರೇಣಿಯಲ್ಲಿ ಎಂ. ಡಿ. ಪಡೆದಿದ್ದ ಇವರಿಗೆ ಹುಬ್ಬಳ್ಳಿಯ ಸರಕಾರಿ ಆಸ್ಪತ್ರೆಯಲ್ಲಿ ಉದ್ಯೋಗ ದೊರೆಯಿತು. ಅಷ್ಟರಲ್ಲಿ ಅವರ ವಿವಾಹವೂ ನಡೆದಿತ್ತು. ಇವರು ನಡೆದು ಬಂದದ್ದು ಉದಾತ್ತ ರಾಜಮಾರ್ಗ. ಸಾಗುತ್ತಿರುವುದು ದಿವ್ಯಪಥ. ವಿಚಾರವಂತರನ್ನು ಮೂಗಿಗೆ ಬೆರಳೇರಿಸುವಂತೆ ಮಾಡುವ ಇವರ ಬದುಕು ಅವರ ಧ್ಯೇಯಾದರ್ಶಗಳು ಪೂರ್ಣ ಮಾನವೀಯತೆಗೆ ಪರಿಶುದ್ಧ ವ್ಯಕ್ತಿತ್ವಕ್ಕೆ ಸಾಕ್ಷಿಯಾಗಿವೆ.

ಅಪೂರ್ವ ತೇಜಸ್ಸಿನಿಂದ ಕೂಡಿದ್ದು ಸದಾ ಮಂದಹಾಸ ಬೀರುವ ಮುಖ, ಪ್ರೀತಿ ವಾತ್ಸಲ್ಯ ಕರುಣೆಯ ಪೂರವನ್ನೇ ಹರಿಸುವ ಕಣ್ಣುಗಳು, ಗೌರವರ್ಣದ ಸ್ಫುರದ್ರೂಪ, ಮಧ್ಯಮ ನಿಲುವಿನ ಆಕರ್ಷಕ ವ್ಯಕ್ತಿತ್ವ. ಹಿರಿತನವನ್ನು ಸಾರುತ್ತ ಹೆಮ್ಮೆಪಡುತ್ತಿರುವ ಬೆಳ್ಳಿಕೂದಲಿನ ಹೊಳೆಯುವ ಕಿರೀಟ, ಬಿಡುವೇ ಇಲ್ಲದ ಇವರಲ್ಲಿ ಕ್ಷಣಕಾಲವಾದರೂ ಮಾತನಾಡುವ ಅವಕಾಶ ದೊರೆತರೆ ಆಗ ಸಿಗುವ ಆನಂದವೇ ಬೇರೆ. ಪರಿಶುದ್ಧ ಜೀವನದ ಸಾರವೆನಿಸುವ ಮುಗುಳ್ನಗು ಎಂಥ ವ್ಯಕ್ತಿಯನ್ನಾದರೂ ಆಕರ್ಷಿಸದಿರದು.

ಇತ್ತೀಚೆಗೆ ಇವರು ಕರ್ನಾಟಕದ ಮೂಲೆ ಮೂಲೆಗೂ ಪರಿಚಿತರು. ಸರಕಾರದ ಕುಟುಂಬ ಯೋಜನಾ ಕಾರ್ಯಕ್ರಮದಲ್ಲಿ ಪ್ರಮುಖ ಪಾತ್ರ

ವಹಿಸಿ ಬೇರೆ ಬೇರೆ ಕಡೆಗಳಲ್ಲಿ ಸೇವಾ ತತ್ಪರರಾಗಿರುವ ಇವರು ಸರಕಾರವು ಅದಕ್ಕಾಗಿ ಕೊಡುವ ಹಣವನ್ನೂ ತೆಗೆದುಕೊಳ್ಳುವುದಿಲ್ಲ.

ಡಾ. ಶ್ರೀನಿವಾಸರ ಬಗೆಗೆ ನಾನು ಸುಮಾರು ೧೨ ವರ್ಷಗಳಿಂದಲೂ ಕೇಳಿ ನೋಡಿ ತಿಳಿದುಕೊಂಡಿದ್ದೇನೆ. ನನ್ನ ಪತಿಯ ಮೂಲಕವೂ ಇವರ ಬಗೆಗಿನ ಅನೇಕ ವಿಷಯಗಳು ನನಗೆ ತಿಳಿಯುತ್ತಿದ್ದವು. ಆದರೆ ಹುಬ್ಬಳ್ಳಿಯ ಕೆ. ಎಂ. ಸಿ. ಆಸ್ಪತ್ರೆಯಲ್ಲೇ ನಾವು ದಂಪತಿಗಳು ಸುಮಾರು ೨೦ ದಿನಗಳ ಕಾಲ ಇರಬೇಕಾಗಿ ಬಂದ ಸಮಯದಲ್ಲಿ ಇವರನ್ನು ಪೂರ್ಣವಾಗಿ ಅಲ್ಲದಿದ್ದರೂ ಸರಿಯಾಗಿ ಅರಿತುಕೊಳ್ಳುವ ಸದವಕಾಶ ಒದಗಿತು. ಆಸ್ಪತ್ರೆಯಲ್ಲಿ ಹೆಜ್ಜೆ ಹೆಜ್ಜೆಗೂ ನಾವು ಇವರನ್ನು ಗಮನಿಸಿದ್ದೇವೆ. ಅವರ ಒಂದೊಂದು ವರ್ತನೆಗೂ ಹೆಮ್ಮೆ ಪಟ್ಟಿದ್ದೇವೆ, ಆನಂದ ಹೊಂದಿದ್ದೇವೆ.

ಡಾ. ಶ್ರೀನಿವಾಸರ ಆದರ್ಶದ, ಎತ್ತರದ ಮುಂದೆ ಸಾಧಾರಣ ವ್ಯಕ್ತಿ ತತ್ತರಿಸುವಂತಾದರೆ ಆಶ್ಚರ್ಯವಲ್ಲ. ಅತ್ಯಂತ ಮೃದು ಸ್ವಭಾವದ ಇವರ ಹೃದಯ ಕಲ್ಲು ಸಕ್ಕರೆಯಂತೆ. ಇಂದಿನ ವಿಚಿತ್ರ ಸಮಾಜದ ಹುಚ್ಚು ಪ್ರವಾಹದ ವಿರುದ್ಧವಾಗಿ ಈಜುತ್ತಿರುವ ಸತ್ವಶಕ್ತಿ ಉದಾತ್ತ ಧೈರ್ಯ ಸಾಮಾನ್ಯವೆನ್ನಲಾಗದು. ಆದರ್ಶದ ದಾರಿಯಲ್ಲಿ ಅನ್ಯಾಯದ ವಿರುದ್ಧ ಮೌನವಾಗಿ ಹೋರಾಡುವ ನೈತಿಕ ಬಲ ಇವರದ್ದಾಗಿದೆ. ಅಸಾಧಾರಣ ಕರ್ತವ್ಯ ಪ್ರಜ್ಞೆಯುಳ್ಳ ಇವರು ಬೆಳಗ್ಗೆ ೮ ಗಂಟೆಗೆ ಮೊದಲೇ ಆಸ್ಪತ್ರೆ ಸೇರಿದರೆ ರಾತ್ರಿಯಾದರೂ ಮನೆಗೆ ಹೋಗಲು ನಿಶ್ಚಿತ ಸಮಯವೇನೂ ಇಲ್ಲದೆ ದಿನದ ೨೪ ಗಂಟೆಗಳಲ್ಲೂ ರೋಗಿಗಳ ಸೇವೆಗೆ ಸಿದ್ಧರಾಗಿಯೇ ಇರುತ್ತಾರೆ. ಊಟ ತಿಂಡಿಯ ಚಿಂತೆ ಬಲು ದೂರ. ವಿದ್ಯಾರ್ಥಿಗಳು ಇತರ ಸಹಾಯಕ ವೈದ್ಯರು ಅದರ ಬಗ್ಗೆ ನೆನಪು ಮಾಡಿದರೂ ಆ ಕಡೆಗೆ ಗಮನವನ್ನೆ ಕೊಡದಿರುವ ದಿನಗಳೆಷ್ಟೊ? "ರೋಗಿಗಳು ಹೀಗೆ ಕಾಯುತ್ತಿರುವಾಗ ನಾನು ಊಟಕ್ಕೆ ಹೇಗೆ ಹೋಗಲಿ? ಅವರನ್ನು ಕಳುಹಿಸಿ ನಂತರ ಹೋಗುತ್ತೇನೆ," ಎನ್ನುತ್ತಾರೆ.

ಪ್ರತಿಯೊಬ್ಬ ಸ್ತ್ರೀಯೂ ಇವರ ತಾಯಿ (ಪತ್ನಿಯನ್ನು ಉಳಿದು). ಆ ತಾಯಂದಿರ ನೋವನ್ನು ಕಣ್ಣೀರನ್ನು ಕಂಡಾಗ ಇವರ ಹೃದಯವೂ ಮಿಡಿಯುತ್ತದೆ, ಕಣ್ಣುಗಳು ತೇವವಾಗುತ್ತವೆ. ಸ್ತ್ರೀಯ ಬಗೆಗಿನ ಇವರ ಭಾವ ದೈವಿಕವಾದದ್ದು. ಸ್ತ್ರೀಯೆಂದರೆ ಆದಿಶಕ್ತಿ ಪುಣ್ಯವಾಹಿನಿ ಪಾವನ ಪ್ರಕೃತಿ. "ನನ್ನ ತಾಯಿ ವಿವಿಧ ರೀತಿಯಲ್ಲಿ ವಿವಿಧ ರೂಪಗಳಲ್ಲಿ ನನ್ನ ಬಳಿ ಬಂದು ನನ್ನನ್ನು ಮಾನವನನ್ನಾಗಿಸಿದ್ದಾಳೆ. ಆಕೆಯ ಸೇವೆಯೇ ನನ್ನ ಉದ್ದೇಶ. ಆಕೆಯ ನೋವು ನನ್ನದೇ ಹೌದು" ಎನ್ನುವಾಗ ಇವರ ಕಣ್ಣುಗಳು ತುಂಬಿ ನಿಲ್ಲುತ್ತದೆ. ಮೌನವಾಗಿ ಕಣ್ಣೀರು ಹರಿಯುತ್ತದೆ.

ಪರಮಾತ್ಮನಲ್ಲಿ ಅಪಾರ ನಂಬುಗೆ. "ಅನೇಕರು ಮಾಡುವಂತೆ ಮನೆಯಲ್ಲಿ ದೇವರ ಪೂಜೆ ಮಾಡಲು ನನಗೆ ಬಿಡುವಿಲ್ಲ. ರೋಗಿಗಳೇ ನನ್ನ ದೇವರು. ಆಸ್ಪತ್ರೆ ನನ್ನ ದೇವಸ್ಥಾನ," ಎನ್ನುವ ಇವರ ಮಾತುಗಳು ಅಂತರಾಳದಿಂದ ಹೊಮ್ಮಿ ಬರುತ್ತವೆ. ಅಕ್ಷರಶಃ ಇದರಂತೆಯೇ ನಡೆಯುವ ಇವರ ಬದುಕು ಸಾರ್ಥಕ. ಧನ್ಯ ಜೀವ ಇದು!

ಹೊರನಾಡುಗಳಿಂದಲೂ ಇವರನ್ನು ಹುಡುಕಿಕೊಂಡು ಅನೇಕ ರೋಗಿಗಳು ಬರುತ್ತಾರೆ. ಎಷ್ಟೋ ಮಂದಿಗೆ ಇವರ ಅಸಾಧಾರಣ ವ್ಯಕ್ತಿತ್ವದ ಪರಿಚಯವಿರುವದಿಲ್ಲ. ಇತರ ಎಲ್ಲರಂತೆ ಎಂದು ತಿಳಿದು ಫೀ ಕೊಡಲು ಹೋಗುವ ಮಂದಿಗೆ ಕೊರತೆಯಿಲ್ಲ. ಅಂದು ನಾನು ಸಂಜೆ ಏಳರ ಹೊತ್ತಿಗೆ ಅವರೊಂದಿಗೆ ಮಾತನಾಡಲು ಅನುಮತಿ ಪಡೆದುಕೊಂಡಿದ್ದೆ. ಯಾರು ಬೇಕಾದರೂ ನೇರವಾಗಿ ಒಳಗೆ ಹೋಗಬಹುದು. ಅವರ ಕಚೇರಿಗೆ ನಾನು ಹೋದಾಗ ಅಲ್ಲೊಬ್ಬ ವ್ಯಕ್ತಿ ಡಾಕ್ಟರರ ಮೇಜಿನ ಮೇಲೆ ಒಂದಿಷ್ಟು ನೋಟುಗಳನ್ನು ಇಟ್ಟು ತೆಗೆದುಕೊಳ್ಳುವಂತೆ ಒತ್ತಾಯಿಸುತ್ತಿದ್ದರು. ಡಾಕ್ಟರರ ಮುಖದಲ್ಲಿ ಎಂದಿನ ಶಾಂತಿ ಸಮಾಧಾನವಿರಲಿಲ್ಲ. ಆತ ಮತ್ತೆ ಬೇಡಿಕೊಂಡರು. ಆಗ ಡಾಕ್ಟರರು ಮತ್ತೆ ಮೃದುವಾಗಿ ಹೇಳಿದರು, "ನೋಡಿ ಸ್ವಾಮಿ, ಕೊನೆಯ ಬಾರಿ ಹೇಳುತ್ತೇನೆ. ನಾನೆಂದೂ ಹಣ

ತೆಗೆದುಕೊಂಡಿಲ್ಲ. ಇನ್ನು ತೆಗೆದುಕೊಳ್ಳುವುದೂ ಇಲ್ಲ, ಕ್ಷಮಿಸಬೇಕು. ಮಾನವನು ಧರ್ಮದಿಂದಲೇ ಹಣ ಗಳಿಸಬೇಕು ಎಂಬುದನ್ನು ನಾನು ನಂಬುತ್ತೇನೆ. ಈ ಹಣ ನನ್ನದಲ್ಲ. ತೆಗೆದುಕೊಂಡು ಹೋಗಿ. ಆಗಲೇ ಹೇಳಿದ ಹಾಗೆ ಈ ಆಸ್ಪತ್ರೆಗೆ ಈ ರೋಗಿಗಳಿಗೆ ಪ್ರಯೋಜನವಾಗುವಂಥದ್ದೇನನ್ನಾದರೂ ಮಾಡಿಕೊಡಿ. ನಮ್ಮಲ್ಲಿ ಅನಾಥ ಮಕ್ಕಳೂ ಇದ್ದಾರೆ. ಸಾಧ್ಯವಾದರೆ ಅವರಿಗೇನಾದರೂ ಕೊಡಿ. ಇಲ್ಲಿಗೆ ಬರುವವರ ನೋವನ್ನು ಪರಿಹರಿಸುವುದರಲ್ಲಿ ಸಹಾಯಕರಾಗಿ. ಇದರಿಂದ ನಿಮಗೆ ಹೆಚ್ಚು ಸಂತೋಷವಾಗುತ್ತದೆ. ಅನೇಕ ರೋಗಿಗಳಿಗೆ . ಉಪಕಾರವಾಗುತ್ತದೆ. ನಮ್ಮ ಪುಸ್ತಕ ಭಂಡಾರಕ್ಕೆ ಪುಸ್ತಕಗಳನ್ನಾದರೂ ಕೊಡಿ. ಅವುಗಳ ಜತೆ ನಿಮ್ಮ ಹೆಸರೂ ಉಳಿಯುತ್ತದೆ. ನಿಮ್ಮ ಪತ್ನಿ ನನ್ನ ತಂಗಿ. ಆ ತಾಯಿಯನ್ನು ನಾವು ನೋಡಿಕೊಳ್ಳುತ್ತೇವೆ. ನೀವು ಖಂಡಿತವಾಗಿಯೂ ಯಾವ ಚಿಂತೆಯೂ ಇಲ್ಲದೆ ದಯಮಾಡಿ ಹೋಗಿ."

ಕೃತಜ್ಞತೆಯಿಂದ ತಲೆಬಾಗಿ ನಮಸ್ಕರಿಸಿದ ಆ ವ್ಯಕ್ತಿ ಹಣವನ್ನೆಲ್ಲ ಎತ್ತಿಕೊಂಡು ಹೊರಟು ಹೋದ.

ಔಷಧ ಪ್ರತಿನಿಧಿಗಳು ಆಗಾಗ ಬಂದು ಇವರಲ್ಲಿ ಕೊಡುವ ಔಷಧಗಳೆಲ್ಲ ಬಡ ರೋಗಿಗಳಿಗೆ ಅಲ್ಲಲ್ಲೇ ಅಂದಂದೇ ಹಂಚಲ್ಪಡುತ್ತವೆ. ಜನರು ಇವರಿಗೆಂದೇ ಕೊಡುವುದೆಲ್ಲ ಆಸ್ಪತ್ರೆಗೆ ಮೀಸಲು. ತಾವೇ ಬಡವರಿಗೆ ಕೊಡುವ ವಸ್ತುಗಳು ಇನ್ನೆಷ್ಟೊ!

"ಒಂದು ಸಲ ಹಣ ತೆಗೆದುಕೊಳ್ಳುವುದು ಎರಡನೆಯ ಸಲಕ್ಕೆ ನಾಂದಿ. ಹೀಗೆಯೇ ಮುಂದೆ ಈ ಹುಚ್ಚೇ ಹಿಡಿಯುತ್ತದೆ. ಇದೊಂದು ಗುಣವಾಗದ ಭಯಂಕರ ಅಂಟುರೋಗ. ಇದರಿಂದ ಮಾನವ ಸಾಯುತ್ತಾನೆ. ಅಲ್ಲಿ ದಾನವ ಹುಟ್ಟಿ ಬೆಳೆಯುತ್ತಾನೆ. ಎಲ್ಲೆಲ್ಲೂ ದಾನವರೇ ತುಂಬಿಕೊಂಡರೆ ಭಾರತ ಏನಾಗುತ್ತದೆ! ನಾನು ಹಾಗಾಗದಂತೆ ಪರಮಾತ್ಮ ನನ್ನನ್ನು ಕಾಪಾಡಬೇಕು," ಎನ್ನುತ್ತ ಭಾವಪರವಶರಾಗಿ ಕ್ಷಣಕಾಲ ಸುಮ್ಮನೆ ಕುಳಿತರು.

ತನ್ನ ಸರೀಕರಂತೆ ತನಗೆ ಕಾರು, ಬಂಗಲೆ ಐಶ್ವರ್ಯ, ಐಷಾರಾಮದ ಸುಖಜೀವನವಿಲ್ಲ ಎಂದು ಇವರೆಂದೂ ಕೊರಗಿದವರಲ್ಲ. ಇವರ ಬೇಕುಗಳೆಲ್ಲವೂ ಅತ್ಯಂತ ಸೀಮಿತ.

"ಎಲ್ಲರಂತೆ ನೀವು ಹಣ ತೆಗೆದುಕೊಂಡರೆ ಸುಖಜೀವನ ನಡೆಸಬಹುದೆಂದು ನಿಮಗೆಂದೂ ಅನಿಸಿಲ್ಲವೇ?" ಎಂದು ನಾನು ಕೇಳಿದಾಗ ಅವರು ಖಂಡಿತವಾಗಿ ಹೇಳಿದರು.

"ಛೇ ಎಂದೂ ಇಲ್ಲ. ಸರಕಾರ ಕೊಡುವ ವೇತನದಿಂದ ನಮಗೆ ಬೇಕಾದ ಜೀವನಾವಶ್ಯಕತೆಗಳನ್ನು ಪೂರೈಸುತ್ತೇನೆ. ಕೆಲವರಿಗೆ ಕಾರು, ಬಂಗಲೆ ಇತ್ಯಾದಿ ಜೀವನಾವಶ್ಯಕ ವಸ್ತುಗಳಾಗಿರಬಹುದು. ನನ್ನ ವಿಚಾರ ಬೇರೆ. ಹೋಗಿ ಬರುವುದಕ್ಕೆ ಸೈಕಲ್ ಬಿಸಿಲು ಮಳೆಯಿಂದ ರಕ್ಷಿಸಿಕೊಳ್ಳಲು ಒಂದು ಆಶ್ರಯವಾದರೂ ಸಾಕು. ತ್ಯಾಗದಿಂದ ಸಿಗುವ ಸುಖವೇ ನಿಜವಾದ ಸುಖ ಎನ್ನುತ್ತೇನೆ."

"ನೀವು ಹೀಗಿರುವುದು ನಿಮ್ಮ ಪತ್ನಿ ಮತ್ತು ಮಕ್ಕಳಿಗೆ ಸಮ್ಮತವೇ?"

"ಹೌದು ಆಕೆ ನನ್ನನ್ನು ಚೆನ್ನಾಗಿ ಅರ್ಥ ಮಾಡಿಕೊಂಡಿದ್ದಾಳೆ. ನನ್ನ ಇಬ್ಬರು ಮಕ್ಕಳು ಕೂಡ ನನಗೆ ತಕ್ಕಹಾಗೆಯೇ ಇರುವುದು ನನ್ನ ಅದೃಷ್ಟವೆನ್ನಬಹುದು. ವೇತನದ ಮಿತಿಯಲ್ಲೇ ಸದಾ ತೃಪ್ತರಾಗಿರಲು ನಾವೆಲ್ಲರೂ ಪ್ರಯತ್ನಿಸುತ್ತೇವೆ. ಅದು ನಮ್ಮ ಧರ್ಮವೂ ಹೌದು."

ಆಪರೇಶನ್ ದಿನ ಬೆಳಿಗ್ಗೆ ೮ ರಿಂದ ಮಧ್ಯಾಹ್ನ ೨–೩೦ ಅಥವಾ ಮೂರು ಗಂಟೆಯ ವರೆಗೂ ಇವರು ಕಾರ್ಯಮಗ್ನರಾಗಿರುತ್ತಾರೆ. ನಂತರದ ವೇಳೆ ಉಪನ್ಯಾಸಕ್ಕೆ, ರೋಗಿಗಳನ್ನು ನೋಡಿ ಪ್ರೀತಿಯ ಮಾತುಗಳನ್ನಾಡಿ ಸಂತೈಸಿ ಬರುವುದಕ್ಕೆ. ದೇಹಕ್ಕೆ ಆಯಾಸವಾದರೂ ಮನಸ್ಸಿಗೆ ಆಯಾಸವೇ ಇಲ್ಲ. ಈ ಚಲಿಸುವ ಜ್ಞಾನ ಗಂಗೋತ್ರಿಯಲ್ಲಿ ಅಸಂಖ್ಯಾತ ವಿದ್ಯಾರ್ಥಿಗಳು ಪುಣ್ಯಸ್ನಾನ ಮಾಡಿ ಧನ್ಯರಾಗಿದ್ದಾರೆ. ತನ್ನೆಡೆಗೆ ಬಂದ ರೋಗಿಯ ಬಡತನವಾಗಲೀ ಸಿರಿತನವಾಗಲೀ ಇವರ ವ್ಯಕ್ತಿತ್ವದ ಮೇಲೆ ಪ್ರಭಾವ ಬೀರಲು ಅಸಮರ್ಥವಾಗುತ್ತದೆ. ಮಾನವೀಯ ದೃಷ್ಟಿಯಿಂದ ಯಾರಿಗೇನು ಮಾಡಲು ಸಾಧ್ಯವೋ

ಅದನ್ನು ಪ್ರಾಮಾಣಿಕವಾಗಿ ಪ್ರತಿಯೊಬ್ಬ ವ್ಯಕ್ತಿಗೂ ದೊರಕಿಸಿ ಕೊಡುತ್ತಾರೆ. ಹೊರ ರೋಗಿಗಳ ದಿನದಂದು ತಾವೇ ಪ್ರತಿಯೊಬ್ಬ ರೋಗಿಯನ್ನು ಕರೆದು ಅನುಕಂಪದ, ವಾತ್ಸಲ್ಯದ ಮಾತುಗಳಿಂದ ಅವರ ನೋವನ್ನು ವಿಚಾರಿಸಿ ಸಂತೈಸುವ ರೀತಿ, ಒಂದು ಅಪರೂಪದ ದೃಶ್ಯ. ತನ್ನ ಮತ್ತು ರೋಗಿಯ ನಡುವೆ ಯಾರ ಸಹಾಯವೂ ಇವರಿಗೆ ಬೇಡ.

ಸಾವಿರಾರು ಮಂದಿ ತಿಳಿದಿರುವಂತೆ ಇವರು ತಮ್ಮ ರಕ್ತವನ್ನೇ ಕೊಟ್ಟು ಸಾಯುತ್ತಿರುವ ಅನೇಕ ರೋಗಿಗಳನ್ನು ಉಳಿಸಿರುವ ಮಹಾನು ಭಾವ. ಇದು ಇಂದಿಗೂ ನಡೆಯುತ್ತಲೇ ಇದೆ. ಒಮ್ಮೆ ಇವರ ಬಳಿಗೆ ಬಂದ ರೋಗಿಯೊಬ್ಬಳು ರಕ್ತಹೀನತೆಯಿಂದ ಸಾಯುವ ಸ್ಥಿತಿಗೆ ಬಂದಿದ್ದಳು. ಆಕೆಯ ಗಂಡ ಧಾಂಡಿಗನಂತಿದ್ದ. ಆತನ ರಕ್ತವನ್ನು ಪರೀಕ್ಷಿಸಿ ಹೆಂಡತಿಗೆ ಕೊಡುವಂತೆ ಕೇಳಿದಾಗ ಆತ ಕೋಪಗೊಂಡು ವೈದ್ಯರ ಬಳಿ ಹೋಗಿ ಹೀಗೆಂದ,

"ರಕ್ತ ಕೊಟ್ಟು ಅವಳ ಜತೆ ನಾನೂ ಸಾಯಲೇನು? ಅವಳು ಸತ್ತರೆ ಸಾಯಲಿ, ನಾನು ಬೇರೆ ಮದುವೆಯಾಗುತ್ತೇನೆ ಡಾಕ್ಟರರೇ!"

ಡಾ. ಶ್ರೀನಿವಾಸರ ದೃಷ್ಟಿಯಲ್ಲಿ ಪತಿ ಪತ್ನಿಯರ ಸಂಬಂಧ ಇಷ್ಟೊಂದು ಹಗುರವಾದುದಲ್ಲವೆಂದು ಆತನಿಗೆ ಹೇಗೆ ತಿಳಿಯಬೇಕು? ಅವರಿಗೆ ಇದರಿಂದ ಕೋಪ ಬಂತು! ಆತನ ಕೆನ್ನೆಗೊಂದು ಬಾರಿಸಿ ತಾವೇ ತಮ್ಮ ರಕ್ತವನ್ನು ಕೊಟ್ಟು ಆ ತಾಯಿಯನ್ನು ಬದುಕಿಸಿದರು. ಇವರು ರಕ್ತ ಕೊಟ್ಟ ಉದಾಹರಣೆಗಳು ಅನೇಕ. ಅವರು ಹೋದೆಡೆಗಳಲ್ಲೆಲ್ಲ ಈ ಸಂಗತಿಗಳು ಸಾಮಾನ್ಯವಾದುದರಿಂದ ಎಲ್ಲರಿಗೂ ತಿಳಿದವುಗಳೇ ಆಗಿವೆ.

ಅನೇಕರ ಪ್ರೀತಿ ವಿಶ್ವಾಸಗಳಿಗೆ ಪಾತ್ರರಾಗಿರುವ ಶ್ರೀನಿವಾಸ ಕೌಲಗುಡ್ಡ ಅವರು ಅತ್ಯುತ್ತಮ ಅಧ್ಯಾಪಕರು. ಎಲ್ಲರೂ ಹೊಗಳುವುದನ್ನು ಕೇಳಿದಾಗ ಇವರ ಒಂದಾದರೂ ಉಪನ್ಯಾಸಕ್ಕೆ ನಾನೂ ಹೋಗಬೇಕೆನಿಸಿತ್ತು. ಅದಕ್ಕೆ ಅನುಮತಿಯೂ ಸಿಕ್ಕಿತು. ಅಂದು ಅವರ ಸಣ್ಣ ಆಪರೇಶನ್‌ಗಳ ದಿನ. ಅವರ ಗುರುಪತ್ನಿಯೊಬ್ಬರು ಖಾಯಿಲೆಯಾಗಿ ಆಸ್ಪತ್ರೆಗೆ ದಾಖಲಾಗಿದ್ದರು. ಅವರದ್ದು ಬೇರೆ ವಿಭಾಗದವರ ಆಪರೇಶನ್, ಆದರೆ ಆಕೆಗೆ ರಕ್ತ ಸಾಲದೆಂದೂ ಅದನ್ನು ಕೊಟ್ಟ ನಂತರವೇ ಆಪರೇಶನ್ ಸಾಧ್ಯವೆಂದು ಸರಿಯಾದ ರಕ್ತ ಬ್ಲಡ್ ಬ್ಯಾಂಕ್‌ನಲ್ಲಿಲ್ಲವೆಂದೂ ಡಾ. ಕೌಲಗುಡ್ಡ ಅವರಿಗೆ ತಿಳಿಯಿತು. ಕೂಡಲೇ ಹೋಗಿ ತಮ್ಮ ರಕ್ತವನ್ನು ಕೊಟ್ಟರು. ಸ್ವಲ್ಪವಾದರೂ ವಿಶ್ರಾಂತಿಯಿಲ್ಲದೆ ಎಂದಿನಂತೆ ತಮ್ಮ ಕೆಲಸವನ್ನು ಮಾಡುತ್ತಲೇ ಇದ್ದು ನಂತರ ಉಪನ್ಯಾಸಕ್ಕೆ ಬಂದರು. ಎರಡು ಗಂಟೆಗಳ ಉಪನ್ಯಾಸ ಹತ್ತೇ ನಿಮಿಷಗಳಲ್ಲಿ ಕಳೆದುಹೋದಂತಾಯಿತು ನನಗೆ. ಅವರು ವಿಷಯವನ್ನು ವಿವರಿಸುವ ರೀತಿ ಅದನ್ನು ವಿದ್ಯಾರ್ಥಿಗಳಿಗೆ ಮಂದಟ್ಟಾಗಿಸುವ ರೀತಿ, ವಿಶಿಷ್ಟವಾದದ್ದು. ಬೇರೆ ಬೇರೆ ಕಡೆಯ ವಿದ್ಯಾರ್ಥಿಗಳೂ ಇತರ ವೈದ್ಯರೂ ಇವರ ಉಪನ್ಯಾಸವನ್ನು ಕೇಳಲು ಬರಬೇಕೆಂದು ಸ್ಪಷ್ಟವಾಯಿತು ಆಗ.

ಇವರು ಉತ್ತಮ ಕಲಾಪ್ರೇಮಿಯೂ ಹೌದು. ಲಲಿತಕಲೆಗಳಲ್ಲಿ ಅತೀವ ಆಸಕ್ತಿ. ಸಂಗೀತ ಅತ್ಯಂತ ಪ್ರಿಯ. ಮಧುರವಾಗಿ ಹಾಡಬಲ್ಲರು. ಪ್ರಸಿದ್ಧ ಕಲಾವಿದರು ಸಂಗೀತಗಾರರು ಕವಿಗಳು. ಕಾದಂಬರಿಕಾರರು ವಿಜ್ಞಾನಿಗಳು, ಎಲ್ಲರ ಬಗೆಗೆ ಇವರಿಗೆ ಅತಿ ಅಭಿಮಾನ. ಎಲ್ಲರ ಕುರಿತೂ ತುಂಬ ಚೆನ್ನಾಗಿ ತಿಳಿದಿದ್ದಾರೆ. ಅವರ ಕೃತಿಗಳನ್ನು ಓದಿದ್ದಾರೆ. ಉತ್ತಮ ಸಾಹಿತ್ಯ ಗ್ರಂಥ ಯಾವುದೇ ಬಂದರೂ ರಾತ್ರಿಯೆಲ್ಲ ಕುಳಿತು ಅದನ್ನು ಓದಬೇಕು! ರಾತ್ರಿ ಒಮ್ಮೆ ನಿದ್ದೆ ಬಂದಿದ್ದು ಮತ್ತೆ ಮಧ್ಯದಲ್ಲೆದ್ದು ರೋಗಿಗಳನ್ನು ನೋಡಲು ನೋಡಲು ಹೋಗಿ ಬಂದರೆ ಪುನಃ ನಿದ್ದೆ ಬರುವುದು ಕಷ್ಟವೆನಿಸುವಾಗ ಇವರ ಓದು ಅಧ್ಯಯನ ಸತತವಾಗಿ ಸಾಗುತ್ತಲೇ ಇರುತ್ತದೆ. ಭಾಷಣ ಮಾಡಲು ನಿಂತರೆ ಸಭೆಯನ್ನು ಮಂತ್ರಮುಗ್ಧವಾಗಿಸಬಲ್ಲರು. ಆಗೊಮ್ಮೆ ನಮ್ಮ ರಾಜ್ಯಪಾಲರ ಅಧ್ಯಕ್ಷತೆಯಲ್ಲಿ ಇರುವ ಮಾಡಿದ ಭಾಷಣವನ್ನು ಕೇಳಿ ಸಭೆ ಅಪಾರ ಮೆಚ್ಚುಗೆ ವ್ಯಕ್ತಪಡಿಸಿತು. ವಿದ್ವಾಂಸರು ತಲೆದೂಗಿದರು. ಅವರ ಗುರುಗಳಲ್ಲೊಬ್ಬರು ಎದ್ದು ಬಂದು ಶಿಷ್ಯನನ್ನು ತಬ್ಬಿಕೊಂಡು ಆನಂದಬಾಷ್ಪ

ಗಳಿಂದ ಅಭಿನಂದಿಸಿದರು. ಅತಿ ಮೇಧಾವಿಯಾಗಿರುವ ಡಾ. ಕೌಲಗುಡ್ಡ ಅವರು ಅಷ್ಟೇ ನಿಗರ್ವಿಯೂ ಹೌದು.

ಉತ್ತಮ ಗೃಹಸ್ಥರೆನಿಸುವ ಇವರು ಧರ್ಮ ಪಾಲನೆಯಲ್ಲಿ ಶ್ರೀರಾಮಚಂದ್ರನಂತೆ ಎಂದು ಹೇಳುವ ಮಾತು ಅತಿಶಯೋಕ್ತಿಯಲ್ಲ. ಇವರ ಗುರು ಶ್ರೀ ದ. ಬಾ. ಕುಲಕರ್ಣಿಯವರು ಹೇಳುವಂತೆ "ಡಾ. ಕೌಲಗುಡ್ಡರು ನನ್ನ ವಿದ್ಯಾರ್ಥಿಯಾಗಿದ್ದರೂ ಇಂದು ನನಗೆ ಅತ್ಯಂತ ಆದರಣೀಯ ವ್ಯಕ್ತಿ. ಅವರ ಆದರ್ಶ ನನ್ನನ್ನು ಮುಗ್ಧನನ್ನಾಗಿಸುತ್ತದೆ. ಯಾವ ರೀತಿಯಿಂದ ನೋಡಿದರೂ ಅಂಥ ವ್ಯಕ್ತಿ ಈ ದಿನಗಳಲ್ಲಿ ಬೇರೆ ಇಲ್ಲವೆಂದೇ ಹೇಳುತ್ತೇನೆ."

ಅತ್ಯಂತ ಆತ್ಮಾಭಿಮಾನಿಯಾಗಿ ಬೆಳೆದು ಬಂದು ಆದರ್ಶದ ಬೆನ್ನುಹತ್ತಿ ಇಂದಿನ ವಿಚಿತ್ರ ಸಮಾಜದಲ್ಲಿ ತನ್ನದೇ ಆದ ಸಮಸ್ಯೆಗಳನ್ನು ಹೊತ್ತು ನಿಂತಿದ್ದಾರೆ ಡಾ. ಕೌಲಗುಡ್ಡ. ಸತತ ದುಡಿಮೆಯಿಂದ ಆರೋಗ್ಯ ಇಳಿಮುಖವಾಗಿದೆಯಾದರೂ ಅದಾವುದರ ಪರಿವೆಯೂ ಅವರಿಗಿದ್ದಂತಿಲ್ಲ. ಇಂದಿನ ಆದರ್ಶವಾದಿಗೆ ಇವೆಲ್ಲ ಅನಿವಾರ್ಯವೇನೊ?




ಡಾ. ಶ್ರೀನಿವಾಸರಂಥ ವ್ಯಕ್ತಿ ಇಂದು ಅಪರೂಪ. ತನ್ನನ್ನು ಅರಸಿ ಬಂದ ಆಸ್ಪತ್ರೆಯ ಪೂರ್ಣ ಅಧಿಕಾರ ಹುದ್ದೆಗೂ ಮೆಡಿಕಲ್ ಕಾಲೇಜಿನ ಪ್ರಿನ್ಸಿಪಾಲರ ಹುದ್ದೆಗೂ ತ್ಯಾಗ ಪತ್ರವಿತ್ತು, ರೋಗಿಗಳ ಸೇವಾ ದೀಕ್ಷೆಯೊಂದನ್ನೇ ಸ್ವೀಕರಿಸಿ ನೋಡುವವರನ್ನೂ ಕೇಳುವವರನ್ನೂ ಆಶ್ಚರ್ಯಗೊಳಿಸಿದ್ದಾರೆ. ಇತರರಂತೆ ಅಧಿಕಾರ ದಾಹದಿಂದ ಮುಂದುವರೆಯುತ್ತಿದ್ದರೆ ಅವರು ಇಂದು ಕರ್ನಾಟಕದ ಅತಿ ಉನ್ನತವಾದ ಒಂದು ಹುದ್ದೆಯಲ್ಲಿರಬಹುದಾಗಿತ್ತು.

ಇವರದು ಒಣ ಉಪದೇಶವಲ್ಲ. ನುಡಿದಂತೆ ನಡೆವ ಜೀವ. ಹೇಗಾದರೂ ಬದುಕಿದರಾಯಿತು ಎಂಬ ವರ್ಗಕ್ಕೆ ಸೇರಿದವರೂ ಅಲ್ಲ. ಹಿಡಿದ ದಾರಿ ಸತ್ಯ, ನ್ಯಾಯ, ಧರ್ಮದ್ದಾಗಿರಬೇಕು. ಮಾನವ ಮಾನವನಾಗಿಯೇ ಬಾಳಬೇಕು. ಆತನು ಮಾಡಬೇಕಾಗಿರುವುದು ದೇವರ ಕೆಲಸ ಎನ್ನುವ ಇಂದಿನ ಸಮಾಜದ ಕುರುಡು ಕಣ್ಣುಗಳಿಗೆ ಬೆಳಕಾಗಬಲ್ಲರು.

ಒಮ್ಮೆ ಇವರ ಬಳಿಗೆ ಹೋದ ಯಾರಿಗೇ ಆದರೂ ಇವರ ಬಗೆಗೆ ಅಪಾರ ಗೌರವವುಂಟಾಗುತ್ತದೆ. ಸ್ತ್ರೀಯರ ಬಗೆಗಿನ ಇವರ ನಡತೆ ಬಲು ಗೌರವಯುತವಾದದ್ದು, ಅತಿ ಘನವಾದದ್ದು' ಅಲ್ಲಿ ಇವರ ವ್ಯಕ್ತಿತ್ವ ದಿವ್ಯತ್ವಕ್ಕೇರುತ್ತದೆ. ಜನಸಾಮಾನ್ಯರು ಇವರನ್ನು ಪರಿಚಯಮಾಡಿಕೊಡುವ ರೀತಿ ವಿಶಿಷ್ಟ. ಈತ ದೇವರಂಥ ಮನುಷ್ಯ. ಕೈಗುಣ ಬಹಳ ಒಳ್ಳೆಯದು. ಮನಸ್ಸು ಬಂಗಾರ. ಅವರ ಹತ್ತಿರ ಹೋದವರಿಗೆಲ್ಲ ಒಳ್ಳೇಯದೇ ಆಗುತ್ತದೆ.

"ಕೌಲಗುಡ್ಡ ಸಾಹೇಬರು ಇದ್ದಾರೇಂತ ಈ ಆಸ್ಪತ್ರೆಯಲ್ಲಿ ಎಲ್ಲವೂ ಚೆನ್ನಾಗಿಯೇ ನಡೆಯುತ್ತದೆ. ಅವರು ಇದ್ದಾರೆ ಅಂತ ಈ ಆಸ್ಪತ್ರೆಗೆ ಇಷ್ಟು ಜನ ಬರ್ತಾರೆ. ದೇವರು ಅವರನ್ನು ಚೆನ್ನಾಗಿ ಇಡಬೇಕು."

ಈಗಲೂ ತಮ್ಮ ಗುರು ಹಿರಿಯರನ್ನು ಕಂಡು ಅವರ ಪಾದಗಳಿಗೆ ನಮಸ್ಕರಿಸಿ ಅವರ ನಿಸ್ವಾರ್ಥ

ಪ್ರೇಮದ ವಾತ್ಸಲ್ಯದ ಮಡಿಲಲ್ಲಿ ಮತ್ತೆ ಮಗುವಿನಂತಾಗಿ ಮೈ ಮರೆಯುತ್ತಾ ಆನಂದಬಾಷ್ಪಗಳನ್ನು ಸುರಿಸುವ ಪರಿ ಹೃದಯಸ್ಪರ್ಶಿ. ಇವರ ಸರಳತೆ, ಸೌಜನ್ಯ, ವಿನಯ ಗುಣಗಳಿಗೆ ಬೆರಗಾಗದವರಿಲ್ಲ. ಇವರ ದೃಷ್ಟಿಯಲ್ಲಿ ಎಲ್ಲರೂ ದೊಡ್ಡವರು. ತಾನು ಮಾತ್ರ ಎಲ್ಲರಿಗಿಂತ ಸಣ್ಣವ. ಈ ಭಾವನೆಯೇ ಇವರನ್ನು ನಿಜವಾಗಿಯೂ ದೊಡ್ಡವರನ್ನಾಗಿಸಿದೆ. ತನ್ನ ಬಗೆಗೆ ಯಾವುದೇ ಒಳ್ಳೆಯ ಮಾತನ್ನು ಆಪೇಕ್ಷಿಸರು; ಬೇರೆ ಯಾರಾದರೂ ಹೊಗಳಿದರೆ "ನೀವು ಬೇರೆ ಯಾರನ್ನೋ ಕುರಿತು ಹೇಳುತ್ತಿದ್ದೀರಿ. ನಾನಂತೂ ಈ ಹೇಳಿಕೆಗೆ ಯೋಗ್ಯನಲ್ಲ," ಎಂದು ಅವರಿಗೆ ಸರಿಯಾದ ಮಾರ್ಗದರ್ಶನ ಮಾಡುತ್ತಾರೆ!

ಒಮ್ಮೆ ನಾನವರನ್ನು ಕೇಳಿದೆ; "ಡಾಕ್ಟರೆ, ನನಗೆ ದಯಮಾಡಿ ನಿಮ್ಮದೊಂದು ಫೋಟೋ ಕೊಡುತ್ತೀರಾ?"

"ಎಂಥ ವಿಚಿತ್ರ ಪ್ರಶ್ನೆ ಕೇಳುತ್ತೀರೀ ನೀವು! ಫೋಟೊಗೂ ನನಗೂ ಸಂಬಂಧವೇ ಇಲ್ಲ! ಮೇಲಾಗಿ ನನ್ನ ಫೋಟೋ ತೆಗೆಯುವ ಸಂದರ್ಭ ನನಗಿನ್ನೂ ಒದಗಿ ಬಂದಿಲ್ಲ!"

"ಹಾಗಾದರೆ ನೀವು ಫೋಟೊ ತೆಗೆಸಿಲ್ಲವೆನ್ನಿ."

"ಯಾಕೆ ತೆಗೆಸಲಿ? ನಾನು ಯಾವ ದೊಡ್ಡ ಮನುಷ್ಯನೆಂದು ಹಾಗೆ ಮಾಡಲಿ? ನಿಮಗದನ್ನು ಕೊಡಬಹುದಾದಷ್ಟು ದೊಡ್ಡ ಮನುಷ್ಯನಾನಾದಾಗ ನಿಮ್ಮನ್ನು ಮರೆಯದೆ ನೀವಿರುವಲ್ಲಿಗೆ ಬಂದು ಖಂಡಿತವಾಗಿ ಕೊಡುತ್ತೇನೆ. ಮಾತ್ರವಲ್ಲ ಧರ್ಮಾರ್ಥವಾಗಿ ಎಲ್ಲರಿಗೂ ಹಂಚುತ್ತೇನೆ. ಈಗ ನನ್ನನ್ನು ದಯಮಾಡಿ ಕ್ಷಮಿಸಿ," ಎಂದು ನನಗೂ ಕೈಮುಗಿದಾಗ ನಾಚಿಕೆಯೆನಿಸಿತು.

ಗೊಂದಲಕ್ಕೆ ನಿರಾಶೆಗೆ ಅನಿಶ್ಚಿತತೆಗೆ ಈಡಾಗಿ ನರಳುತ್ತಿರುವ ಇಂದಿನ ಅಮಾನುಷೀಯ ಸಮಾಜ ಪರಿಸರದಲ್ಲಿ ಅಲ್ಲೊಂದು ಇಲ್ಲೊಂದು ಸಿಗುವ ಇಂಥ ಮಹಾ ಚೇತನಗಳು ಮರುಭೂಮಿಯಲ್ಲಿ ಸಿಗುವ ಜಲದಂತೆ ಸಜ್ಜನರಿಗೆ ಆಶಾದಾಯಕವಾಗಿ ಪರಿಣಮಿಸುತ್ತದೆಂಬುದು ನಿಶ್ಚಯ.

ಅದೊಂದು ದಿನ ಡಾ. ಶ್ರೀನಿವಾಸ ರಾತ್ರಿ ಹತ್ತು ಗಂಟೆಯ ವೇಳೆಗೆ ಆಸ್ಪತ್ರೆ ಬಿಟ್ಟು ಮನೆಯ ಕಡೆಗೆ ಹೊರಟಿದ್ದರು. ನಾನು ಮುಂದೆ ಬಂದು ಕೇಳಿದೆ.

"ಇಷ್ಟೊಂದು ತಡವಾಗಿ ಮನೆಗೆ ಹೋದರೆ ಊಟದ ವೇಳೆ ಮೀರಿ ಹೋಗುತ್ತದಲ್ಲವೇ ಡಾಕ್ಟರ್?"

ನೋಡೀಮ್ಮಾ ನಾನು ದಿನಕ್ಕೊಂದು ಬಾರಿ ಊಟ ಮಾಡುತ್ತೇನೆ. ರಾತ್ರಿ ಊಟ ಬಿಟ್ಟು ಈಗ ೨೦ ವರ್ಷಗಳೇ ಕಳೆದವು."

"ಹಾಗಾದರೆ ಬಹಳ ಚಿಕ್ಕ ವಯಸ್ಸಿನಲ್ಲಿ ಹೀಗೆ ಊಟ ಬಿಡಲು........."

"ಕಾರಣ ತಾನೆ ನಿಮಗೆ ಬೇಕು? ಕೇಳಿ, ನಮ್ಮ ದೇಶದಲ್ಲಿ ಎಷ್ಟು ಮಂದಿ ದಿನಕ್ಕೆರಡು ಬಾರಿ ಊಟ ಮಾಡಬಹುದು ಈ ಅರ್ಥದಲ್ಲಿ," ಎನ್ನುತ್ತ ಮುಗುಳುಕ್ಕು ಮುಂದೆ ಹೆಜ್ಜೆ ಹಾಕಿದರು. ನಾನು ಅವರು ಮರೆಯಾಗುವವರೆಗೂ ಅಲ್ಲೆ ನಿಂತಿದ್ದೆ! ಅವರ ಒರಿತನಕ್ಕೆ ತ್ಯಾಗ ಜೀವನಕ್ಕೆ ಮನಸ್ಸಿನಲ್ಲೆ ವಂದಿಸಿದೆ.

ತನ್ನ ಪತಿಯ ಇಂಥ ಉನ್ನತ ಆದರ್ಶಕ್ಕೆ, ಸಾಧನೆಗೆ ಸದಾ ಸಹಾಯಕರಾಗಿರುವ ಇವರ ಪತ್ನಿ ಶ್ರೀಮತಿ ಶಾರದಾದೇವಿ (ಶರದಿನಿ) ಯವರು ಒಬ್ಬ ಆದರ್ಶ ಗೃಹಿಣಿ, ಪದವೀಧರೆ, ಗೃಹಲಕ್ಷ್ಮಿ, ಪತಿಪರಾಯಣೆ ಎಂಬ ಅರ್ಥ ಇಲ್ಲಿ ಸಾರ್ಥಕತೆಯನ್ನು ಹೊಂದಿದೆ. ಪತಿಯ ಆದರ್ಶ ಇವರಿಗೆ ಅತ್ಯಂತ ಹೆಮ್ಮೆಯ ವಿಷಯವಾಗಿದೆ.

ಇಂದು ಮನೆ ಮನೆಯ ಸ್ತ್ರೀ ಪುರುಷರೆಲ್ಲ ಇಂಥ ಆದರ್ಶವನ್ನು ಪಾಲಿಸುವದಾದರೆ ಭಾರತದಲ್ಲ ತಾಂಡವಾಡುತ್ತಿರುವ ಅಧರ್ಮ, ಅಶಿಸ್ತು ಅಮಾನುಷತೆ ಎಲ್ಲವೂ ತೊಲಗಿ ಮತ್ತೆ ರಾಮ ರಾಜ್ಯವಾಗದೇ? ✡



**ತನ್ನ ಬುದ್ಧಿವಂತಿಕೆಯ ಬಗೆಗೆ ತಾನೇ ಜಂಬ ಪಡುವ ಬುದ್ಧಿವಂತ, ತನ್ನ ವಿಶಾಲ ಕೋಣೆಯ ಬಗೆಗೆ ಜಂಬ ಪಡುವ ಕೈದಿ-ಇಬ್ಬರೂ ಒಂದೇ.**

**-ಸೈಮನ್ ವೀಲ್**

# ಪದಾರ್ಥ ಚಿಂತಾಮಣಿ

-೪೨-

ತುಂಬಾ ದಕ್ಷನಾದ ಕೆಲಸಗಾರ ಅನ್ನುತ್ತೇವೆ. ಇಂಗ್ಲೀಷಿನಲ್ಲಿ efficient ಎನ್ನುವ ಪದಕ್ಕೆ ಇದು ಸಮಾನಾರ್ಥವಾಗಿ ಬಳಕೆಯಲ್ಲಿದೆ. ಇಂಗ್ಲೀಷಿನ efficient ಫ್ರೆಂಚ್ ಮೂಲಕ ಲ್ಯಾಟನ್ನಿನಿಂದ ಬಂದದ್ದು. ಅದರ ಅರ್ಥ ಕೆಲಸದಲ್ಲಿ ಗಟ್ಟಿಗ ಎಂದು. ನಮ್ಮ ದಕ್ಷ ಅದಕ್ಕಿಂತ ಸ್ವಾರಸ್ಯವಾದ ದಾರಿಗಳಲ್ಲಿ ನಡೆದು ಬಂದಿದೆ. ದಕ್ಷ್ ಎಂಬ ಧಾತುವಿನ ಅರ್ಥ ಬಲಿಷ್ಠವಾಗಿರು ಎಂದು ನಮ್ಮ ನಿರ್ವಚನಕಾರರು ಹೇಳುತ್ತಾರೆ. ಬಲಿಷ್ಠನೇ ಸಮರ್ಥ ಅಲ್ಲವೆ? ಇದು ಬಹಳ ಪ್ರಾಚೀನ ಶಬ್ದ. ಋಗ್ವೇದದಿಂದಲೇ ಅದು ಸಾಹಿತ್ಯದಲ್ಲಿ ಕಾಣಿಸಿಕೊಳ್ಳುತ್ತದೆ. ಅದರಿಂದಲೇ ದಕ್ಷಿಣ ಹುಟ್ಟಿದೆ. ಅದರ ಅರ್ಥ ಬಲ ಬದಿಗೆ ಎಂದು. ನಾವು ಬಲಗೈ ಎನ್ನುವಾಗ ಅದು ನಮ್ಮೆರಡು ಕೈಗಳಲ್ಲಿ ಹೆಚ್ಚು ಶಕ್ತಿಯುಳ್ಳದ್ದು ಎಂಬುದೇ ಮೂಲ ತಾತ್ಪರ್ಯ. ದ್ರಾವಿಡದ ಬಲ್, ವಲ್ ಶಬ್ದ ಶಕ್ತಿಯುಳ್ಳದ್ದೆಂದು ಅರ್ಥ ಕೊಡುತ್ತದೆ. ಭಾರತದಾಚೆಗೆ ಹೋದರೆ ಲ್ಯಾಟಿನ್, ಗ್ರೀಕ್ ಭಾಷೆಗಳಲ್ಲಿ ದಕ್ಷಕ್ಕೆ dex, dexter ಪದಗಳಿವೆ. ಅದಕ್ಕೆ ಹತ್ತಿರವಾಗಿರುವ ಗಾಥಿಕ್ taihswa ಪದವಿದೆ. ಇವೆಲ್ಲ ಬಲ ಬದಿಯನ್ನೇ ಸೂಚಿಸುತ್ತವೆ. dexterous ಅಂದರೆ ಕಾರ್ಯ ಸಮರ್ಥ. ನಾವು ಕಾರ್ಯ ಮಾಡುವುದು ಬಲಗೈಯಿಂದಲ್ಲವೇ ? ನಮ್ಮ ದಕ್ಷ ಒಟ್ಟು ಸಾಮರ್ಥ್ಯವನ್ನು ಸೂಚಿಸಿದರೆ dexterous ಕೈಚಳಕ ಚುರುಕುತನವನ್ನು ದ್ಯೋತಿಸುತ್ತದೆ. ವ್ಯತ್ಯಾಸ ಅತ್ಯಲ್ಪ.

ದಕ್ಷ, ದಕ್ಷಿಣದಿಂದ ದಾಕ್ಷಿಣ್ಯ ಹುಟ್ಟಿದೆ. ಇದರ ಅರ್ಥಚ್ಛಾಯೆ ದಯಾ ಸ್ವಭಾವ ಎಂಬುದಾಗಿ ಪ್ರಚಲಿತವಾಗಿದೆ. ಕೊಡುಗೈಯವನು ದಾಕ್ಷಿಣ್ಯಪರ: ಯಾಕಂದರೆ ಕೊಡುವುದು, ತೆಗೆದುಕೊಳ್ಳುವುದು ಕೂಡ ಬಲಗೈಯಿಂದ ತಾನೆ. ಆದ್ದರಿಂದ ವೇದದಲ್ಲಿ ದಾನ ಸ್ವೀಕರಿಸುವ ಪಾತ್ರತೆಗೂ ದಾಕ್ಷಿಣ್ಯ ಎಂಬ ಪದ ಇದೆ.

ಬಲ = ದಕ್ಷಿಣ ಎಂಬುದರಿಂದ ಪ್ರದಕ್ಷಿಣ ಶಬ್ದ. ಪ್ರ-ದಕ್ಷಿಣ ಅಂದರೆ ದಕ್ಷಿಣ ದಕ್ಷಿಣಕ್ಕೆ ಅಂದರೆ ಬಲ-ಬಲಕ್ಕೆ ಹೋಗುವುದು. ನಾವು ಗುಡಿಗೆ ಸುತ್ತುಹಾಕುವಾಗ ಗರ್ಭಗೃಹ ಯಾವಾಗಲೂ ನಮ್ಮ ಬಲಕ್ಕೆ ಇರುವಂತೆ ನಡೆಯುತ್ತೇವೆ. ಆದ್ದರಿಂದ ಈ ಕಲ್ಪನೆಗೆ ಕನ್ನಡದಲ್ಲಿಯೂ ಬಲವರ್ (ಬಲ ಬರು) ಎಂದು ಹೇಳುವುದು. ಬಲವಂದೆರಗಿದನ್ ಇತ್ಯಾದಿ. ಒಂದು ಇನ್ನೊಂದರ ತರ್ಜುಮೆ ಎಂಬಂತಿದೆ ಈ ಶಬ್ದಗಳು.

ಶಿವನಿಗೆ ಹೆಣ್ಣುಕೊಟ್ಟ ನಮ್ಮ ದಕ್ಷಬ್ರಹ್ಮ ಇದ್ದಾನಲ್ಲ. ಇವನಿಗೆ ಆ ಹೆಸರು ಬಂದದ್ದು ಬ್ರಹ್ಮನ ಬಲಗೈ ಹೆಬ್ಬೆರಳಿಂದ ಅವನು ಹುಟ್ಟಿದ್ದರಿಂದ. ದಕ್ಷನು ಪ್ರಜಾಪತಿಯೂ ಆಗಿದ್ದುದರಿಂದ ಸೃಷ್ಟಿಕರ್ತನೂ ಹೌದು. ಅವನ ಕಲ್ಪನೆ ಆದಿ ಮನುಷ್ಯನ ಕಲ್ಪನೆಯಾಗಿರಲೂಬಹುದು. ಬಲಗೈ ಅಥವಾ ಬಲಭಾಗ ಬಲವಾಗಿರುವುದು ಮಾನವನ ಸಾಮಾನ್ಯ ಲಕ್ಷಣವಲ್ಲವೆ? ಈ ದಕ್ಷಬ್ರಹ್ಮ ತನ್ನೊಬ್ಬಳು ಮಗಳಾದ ಗೌರಿಯನ್ನು ವಾಮದೇವ(ವಾಮ = ಎಡ)ನಾದ ಶಿವನಿಗೆ ಕೊಟ್ಟ ಎನ್ನುವುದು ಸ್ವಾರಸ್ಯವಾಗಿದೆ.

ದಕ್ಷಿಣ ಶಬ್ದಕ್ಕೆ ನ್ಯಾಯವಾದದ್ದು, ಸರಿಯಾದದ್ದು ಎಂಬ ಅರ್ಥವೂ ಇದೆ. ಬಲಿಷ್ಠವಾದದ್ದೇ ಸರಿಯಾದದ್ದು ! ಇಂಗ್ಲೀಷಿನಲ್ಲಿ ಬಲ ಬದಿಗಿರುವ right ಶಬ್ದ ಮೂಲತಃ ನೆಟ್ಟಗಿರುವುದು, ನ್ಯಾಯವಾದದ್ದು ಎಂಬೆರಡೂ ಅರ್ಥವನ್ನೊಳಗೊಂಡಿದೆ. ಹಾಗೆಯೇ ಎಡ ಎಂಬರ್ಥದ left ಶಬ್ದ ದುರ್ಬಲ ಎಂಬ ಅರ್ಥದ್ದು. ಕನ್ನಡ ಎಡ ಎಂದರೂ ದುರ್ಬಲವೇ; ಕಡಿಮೆ ಯೋಗ್ಯತೆಯದೇ.

—ಪಾವೆಂ

ಸಾಗರದ ಸಮೀಪದಲ್ಲಿರುವ ಆ ನಗರದ ಜನತೆ ಆ ದಿನ ರಾತ್ರಿ ಭಾರೀ ಗುಡುಗಿನ ಸದ್ದು ಕೇಳಿಸಿ ಎಚ್ಚೆತ್ತರು. ಮನೆಗಳ ಗೋಡೆಗಳು ಕಂಪಿಸಿದವು. ತೀವ್ರವಾದ ಕಂಪನದಿಂದ ನೆಲ ನಡುಗಿತ್ತು. ಭಯದಿಂದ ದಿಗ್ಭ್ರಾಂತರಾದ ಜನ ತಮ್ಮ ಮನೆಗಳಿಂದ ಹೊರಬಂದು ರಸ್ತೆಯ ಕಡೆಗೆ ಧಾವಿಸಿದರು. ೪೦ ನಿಮಿಷಗಳ ಬಳಿಕ ಸಾಗರದ ಅಲೆಗಳು ಘೋರ್ಗರೆದು ಮುನ್ನುಗುತ್ತಾ ನಗರದ ಬೀದಿಗಳನ್ನು ನೆಕ್ಕತೊಡಗಿದುವು. ನಿಮಿಷ ನಿಮಿಷಕ್ಕೂ ಅಲೆಗಳ ಅಬ್ಬರ ಆವೇಶ ತೀವ್ರವಾಗುತ್ತಿತ್ತು; ಉತ್ಕಟವಾಗುತ್ತಿತ್ತು. ಸಾಗರದ ಉಕ್ಕೇರುವ ಪ್ರವಾಹದ ಅಲೆಗಳು ನಗರದ ಕಡೆಗೆ ನೇರವಾಗಿ ರಭಸದಿಂದ

# 'ತ್ಸುನಾಮಿ'ಗಳ ಬಗ್ಗೆ ಜಾಗೃತರಾಗಿರಿ

**ಬಿ. ಅರುಣನಾರಾಯಣ**

ಮುನ್ನುಗ್ಗಿ ರಸ್ತೆಗಳನ್ನೆಲ್ಲಾ ಕೊಚ್ಚುತ್ತಾ ಬರುತ್ತಿದ್ದುವು. ಆದರೆ ಮರುಕ್ಷಣವೇ ಅಲೆಗಳ ಅಬ್ಬರ ತಗ್ಗಿತು. ಮತ್ತೆ ಕಾಲು ಗಂಟೆ ಕಳೆದ ತರುವಾಯ ೧೦ ಮೀಟರ್ ಎತ್ತರ ಭಾರೀ ಅಲೆಯೊಂದು ನಗರದ ಸೀಮೆಗೆ ಅಪ್ಪಳಿಸಿತು. ಈ ಬಾರಿ ಮಾತ್ರ ಅದು ನಗರದ ಬೀದಿ ಬದಿಯ ಮನೆಗಳನ್ನು, ಜನರನ್ನು, ಪ್ರಾಣಿಗಳನ್ನು ಸಂಪೂರ್ಣವಾಗಿ ತನ್ನ ಒಡಲಲ್ಲಿ ಕರಗಿಸಿಕೊಂಡಿತು.

ಇದು ೧೯೫೨ರಲ್ಲಿ ಸೋವಿಯೆತ್ ರಶಿಯದ ಪೂರ್ವಭಾಗದಲ್ಲಿರುವ ಕಾಮ್ಚಾತ್ಕಾ ಪ್ರದೇಶದ ಮೇಲೆ ಅಪ್ಪಳಿಸಿ ಭಾರೀ ವಿನಾಶ ಉಂಟುಮಾಡಿದ 'ತ್ಸುನಾಮಿ'ಯ ವರ್ಣನೆ.

'ತ್ಸುನಾಮಿ' ಎಂದರೇನು ? ಸಮುದ್ರದಲ್ಲಿ ವಿನಾಶಕಾರಿ ಸ್ವರೂಪದ ಅಲೆಗಳ ಉಬ್ಬರದಿಂದಾಗುವ ವ್ಯಾಪಕ ಹಾನಿ ಈ ಜಗತ್ತಿನಷ್ಟೇ ಪ್ರಾಚೀನವಾದುದು. ಇಂತಹ ವಿನಾಶಕಾರಿ ಅಲೆಗಳನ್ನು ಜಪಾನಿ ಭಾಷೆಯಲ್ಲಿ ತ್ಸುನಾಮಿ ಎನ್ನುತ್ತಾರೆ. ಜ್ವಾಲಾಮುಖಿ ಆಸ್ಫೋಟ ಹಾಗೂ ಸಮುದ್ರ ಕಂಪನದ ಪರಿಣಾಮವಾಗಿ ಇಂತಹ ವಿನಾಶಕಾರಿ ಅಲೆಗಳ ವಿದ್ಯಮಾನ ಸಂಭವಿಸುತ್ತದೆ ಎಂದು ವಿಜ್ಞಾನಿಗಳು ಹೇಳುತ್ತಾರೆ.

ಸುಮಾರು ೩೫೦೦ ವರ್ಷಗಳ ಹಿಂದೆ ಅಸಾಧಾರಣ ಸ್ವರೂಪದ, ಅಭೂತ ಪೂರ್ವ ಔನ್ನತ್ಯದ ವಿನಾಶಕಾರಿ ಅಲೆಗಳು ಉಗಾರಿತ್ ಎಂಬ ಹೆಸರಿನ ಪಟ್ಟಣವನ್ನು ಸಂಪೂರ್ಣವಾಗಿ ನಾಮಾವಶೇಷಗೊಳಿಸಿದವು ಎಂದು ಸಿರಿಯದಲ್ಲಿ ಪ್ರಾಚ್ಯ ವಸ್ತುಗಳ ಸಂಶೋಧನಾ ತಜ್ಞರು ಅನ್ವೇಷಣೆ ನಡೆಸಿದಾಗ ದೊರೆತ ಕ್ಯೂನೆ ಫಾರ್ಮ್ ಬರಹದ ಫಲಕಗಳಲ್ಲಿ ಲಿಖಿತವಾಗಿದೆ. ತ್ಸುನಾಮಿಯ ಬಗ್ಗೆ ಈ ವರೆಗೆ ನಮಗೆ ದೊರೆತಿರುವ ಮಾಹಿತಿಗಳಲ್ಲಿ ಇದೇ ಅತ್ಯಂತ ಪ್ರಾಚೀನವಾದದ್ದು.

೮೬೯ ರಲ್ಲಿ ತ್ಸುನಾಮಿ ಜಪಾನಿನ ಹೊನ್‌ಶು ದ್ವೀಪದ ಕರಾವಳಿಯ ಮೇಲೆ ಅಪ್ಪಳಿಸಿದ ಪರಿಣಾಮವಾಗಿ ನೂರಾರು ಗ್ರಾಮಗಳು ನೆಲಸಮವಾದವು. ಸಾವಿರಾರು ಮಂದಿ ಸಾವಿಗೀಡಾದರು.

೧೫೬೮ರಲ್ಲಿ ಪೆರುವಿನಲ್ಲಿ ಸಂಭವಿಸಿದ ಭಯಂಕರ ಭೂಕಂಪದ ಬಳಿಕ ೨೦ ಮೀಟರ್ ಎತ್ತರದ ಭಾರೀ ಅಲೆ ಕರಾವಳಿ ಪ್ರದೇಶಕ್ಕೆ ಬಡಿದು

ವ್ಯಾಪಕ ಹಾನಿಯುಂಟುಮಾಡಿತು.

೧೯೭೭ರಲ್ಲಿ ತ್ಸುನಾಮಿ ಇಂಡೋನೇಶಿಯದ ಕರಾವಳಿ ಸೀಮೆಗೆ ಅಪ್ಪಳಿಸಿದ ಪರಿಣಾಮವಾಗಿ ೩೦೦ಕ್ಕೂ ಹೆಚ್ಚು ಮಂದಿ ಸಾವಿಗೀಡಾದರು. ಸುಮಾರು ನಾಲ್ಕು ಸಾವಿರದಷ್ಟು ಮಂದಿ ಮನೆ ಮಾರು, ಆಸ್ತಿಪಾಸ್ತಿಗಳನ್ನು ಕಳೆದುಕೊಂಡು ನಿರ್ಗತಿಕರಾದರು.

ಹೀಗೆ ತ್ಸುನಾಮಿಯಿಂದಾದ ವಿನಾಶ ಕಾರ್ಯಗಳ ಬಗ್ಗೆ ಇತಿಹಾಸದಲ್ಲಿ ಸಾಕಷ್ಟು ನಿದರ್ಶನಗಳು ದೊರಕುತ್ತವೆ. ಆದರೆ ಈ ದುರಂತವನ್ನು ತಡೆಗಟ್ಟುವುದು ಹೇಗೆ ಎಂಬ ವಿಚಾರ ಮಾತ್ರ ಇತಿಹಾಸದಲ್ಲಿ ಎಲ್ಲಿಯೂ ಉಲ್ಲೇಖವಾಗಿಲ್ಲ. ಅವುಗಳ ವಿನಾಶ ಕೃತ್ಯಗಳಿಂದ ಸಂರಕ್ಷಿಸಿಕೊಳ್ಳುವ ಬಗ್ಗೆ ತಜ್ಞರು, ವಿಜ್ಞಾನಿಗಳು ಸತತವಾಗಿ ಸಂಶೋಧನೆಗಳನ್ನು ನಡೆಸುತ್ತಿದ್ದಾರೆ.

ತ್ಸುನಾಮಿಯ ಕಾರ್ಯಾಚರಣೆ ತಂತ್ರದ ಬಗ್ಗೆ ಹಲವು ವಿಚಾರಗಳು ಇನ್ನೂ ರಹಸ್ಯವಾಗಿವೆ. ಭೂಕಂಪದ ಪರಿಣಾಮವಾಗಿ ಹಾಗೂ ಜ್ವಾಲಾಮುಖಿಗಳಿಂದಾಗಿ ಉಕ್ಕುವ ಲಾವಾರಸದ ಅತ್ಯಧಿಕ ಉಷ್ಣತೆಯ ಪರಿಣಾಮವಾಗಿ ದೈತ್ಯ ಸ್ವರೂಪದ ಅಲೆಗಳು ಸಮುದ್ರದಲ್ಲಿ ಉಗಮವಾಗುತ್ತವೆ ಎಂದು ವಿಜ್ಞಾನಿಗಳು ಅಭಿಪ್ರಾಯ ಪಡುತ್ತಾರೆ. ಭೂಕಂಪದಿಂದಾಗಿ ಭೂಮಿಯ ಆಳದ ಪದರುಗಳು ಸ್ಥಳಾಂತರಗೊಳ್ಳುವುದರಿಂದ ಹೀಗಾಗುತ್ತದೆ ಎನ್ನುತ್ತಾರೆ.

ತ್ಸುನಾಮಿ ವಿದ್ಯಮಾನಗಳು ಹಿಂದೂ ಮಹಾಸಾಗರ, ಅರಬೀ ಸಮುದ್ರ, ಭೂಮಧ್ಯ ಸಮುದ್ರದಲ್ಲೂ ಸಂಭವಿಸಿವೆ. ಆದರೆ ಶೇಕಡಾ ೮೦ರಷ್ಟು ತ್ಸುನಾಮಿಗಳು ಶಾಂತಸಾಗರವೊಂದರಲ್ಲಿಯೇ ಸಂಭವಿಸುತ್ತವೆ. ಶಾಂತಸಾಗರದಲ್ಲಿ ಪ್ರತಿ ಹತ್ತು ವರ್ಷಕ್ಕೊಮ್ಮೆ ೨೦ ರಿಂದ ೩೦ ಮೀಟರ್ ಎತ್ತರದ ಭಯಂಕರ ಶಕ್ತಿಶಾಲಿಯಾದ ವಿನಾಶಕಾರಿ ಅಲೆಗಳು ಎದ್ದು ಭಾರೀ ವಿನಾಶ ಉಂಟುಮಾಡುತ್ತಿವೆ.

ಸಮುದ್ರತೀರದ ನಗರಗಳಲ್ಲಿ ಭೂಕಂಪ ಸಂಭವಿಸಿದಾಗ ತ್ಸುನಾಮಿಯಿಂದಲೂ ಅಪಾಯ ಸನ್ನಿಹಿತವಾಗುವ ಬಗ್ಗೆ ಜನತೆಗೆ ಎಚ್ಚರಿಕೆ ನೀಡಲಾಗುತ್ತಿತ್ತು. ಇಲ್ಲಿ ಇನ್ನೊಂದು ಅಂಶವೂ ಗಮನಾರ್ಹ. ತ್ಸುನಾಮಿ ಗಂಟೆಗೆ ೮೦೦ ಕಿಲೋಮೀಟರುಗಳಷ್ಟು ವೇಗದಲ್ಲಿ, ಜೆಟ್ ವಿಮಾನದ ವೇಗವನ್ನೂ ಮೀರಿಸಿದ ಪ್ರಚಂಡ ವೇಗದಲ್ಲಿ ಧಾವಿಸಿ ಬಂದು ಅಪ್ಪಳಿಸುತ್ತದೆ. ಆದರೆ ಇಂತಹ ವಿನಾಶಕಾರಿ ಅಲೆಗಳು ಸಮುದ್ರದಲ್ಲಿ ಉಗಮವಾಗಲು ಪ್ರಾರಂಭಿಸಿದ ವೇಳೆಯಿಂದ ಅವು ಕರಾವಳಿ ಸೀಮೆಯ ತನಕ ಧಾವಿಸಿ ಬಂದು ಅಪ್ಪಳಿಸುವ ನಡುವಣ ಅವಧಿಯಲ್ಲಿ ಸಾಕಷ್ಟು ಸಮಯ ವ್ಯಯವಾಗುತ್ತದೆ. ಕೆಲವೊಮ್ಮೆ ೧ ಗಂಟೆಯಾಗುವುದೂ ಇದೆ.

ಸಮುದ್ರದಲ್ಲಿ ವಿನಾಶಕಾರಿ ಸ್ವರೂಪದ ದೈತ್ಯಾಕಾರದ ಅಲೆಗಳ ಉಗಮದ ಬಗ್ಗೆ ಮುಂಚಿತವಾಗಿಯೇ ಅಂದಾಜು ಮಾಡಲು ಸೋವಿಯೆತ್ ರಶಿಯ, ಜಪಾನ್, ಅಮೇರಿಕದ ತ್ಸುನಾಮಿ ಸೇವಾ ಸಂಸ್ಥೆಗಳು ೧೯೫೦ರ ದಶಕದಿಂದಲೇ ಕೆಲವೊಂದು ವಿಧಾನಗಳನ್ನು ಅನುಸರಿಸುತ್ತಿದ್ದವು. ಆದರೆ ಇವು ಅಷ್ಟೊಂದು ಪರಿಣಾಮಕರವಾಗಿರಲಿಲ್ಲ.

ತ್ಸುನಾಮಿಗಳು ಸಂಭವಿಸುವುದರ ಬಗ್ಗೆ ವಿಶ್ವಾಸಾರ್ಹವಾದ ಖಚಿತವಾದ ಆಧಾರಗಳ ಕೊರತೆಯಿಂದಾಗಿ ಅವುಗಳ ಬಗ್ಗೆ ಜನತೆಗೆ ಮುಂಚಿತವಾಗಿ ಎಚ್ಚರಿಕೆ ನೀಡಲು ಸಾಧ್ಯವಾಗುವುದಿಲ್ಲ.

ಕಳೆದ ಫೆಬ್ರುವರಿ ತಿಂಗಳಲ್ಲಿ ಕಪ್ಪು ಸಮುದ್ರದ ಬದಿಯ ನಗರವೊಂದಕ್ಕೆ ತ್ಸುನಾಮಿಯಿಂದ ಹಾನಿಯುಂಟಾಗುವ ಬಗ್ಗೆ ಎಚ್ಚರಿಕೆ ನೀಡಲಾಯಿತು. ಆಗ ಹವೆಯೂ ಅತ್ಯಂತ ಶೀತಲವಾಗಿತ್ತು. ಜನ ಭಯಭೀತರಾಗಿ ಒಳನಾಡು ಪ್ರದೇಶಗಳಿಗೆ ಓಡಿಹೋದರು. ಆದರೆ ಆ ಸಂದರ್ಭದಲ್ಲಿ ತ್ಸುನಾಮಿ ಸಂಭವಿಸಲಿಲ್ಲ. ಔದ್ಯಮಿಕ ಕೇಂದ್ರಗಳನ್ನು ಮುಂಜಾಗ್ರತೆಯ ಕ್ರಮವಾಗಿ ಮುಚ್ಚಿದ್ದ ಕಾರಣ ಉತ್ಪಾದನೆ ಪ್ರಮಾಣ ಕುಂಠಿತವಾಯಿತು. ಸಮುದ್ರದ ಬದಿಯ ನಗರದ ವಸತಿ ಪ್ರದೇಶಗಳಲ್ಲಿದ್ದವರನ್ನು ಮುಂಜಾಗ್ರತೆ ಕ್ರಮವಾಗಿ ಬೇರೆಡೆಗೆ ಸ್ಥಳಾಂತರಿಸಿದ ಕಾರಣ ಅವರು ಅನಾರೋಗ್ಯ ಪೀಡಿತರಾದರು. ಒಟ್ಟಿನಲ್ಲಿ ತ್ಸುನಾಮಿಗಳಿಂದ ವಿನಾಶ ಸಂಭವಿಸುವ ಬಗ್ಗೆ ಮೊದಲೇ ಖಚಿತವಾಗಿ

ಅಂದಾಜು ಮಾಡಿ ಮುನ್ಸೂಚನೆ ನೀಡುವ ಅವಶ್ಯಕತೆ ಇದೆ. ಕೇವಲ ಊಹಾಪೋಹಗಳಿಂದ ಬೇರೆ ರೀತಿಯ ತೊಡಕುಗಳು ಉದ್ಭವಿಸುತ್ತವೆ.

ತ್ಸುನಾಮಿಗಳು ಸಂಭವಿಸುವ ಸಾಧ್ಯತೆಯನ್ನು ಕರಾರುವಾಕ್ಕಾಗಿ ಅಂದಾಜು ಮಾಡುವ ವಿಧಾನಗಳನ್ನು ಅಭಿವೃದ್ಧಿಗೊಳಿಸಲು ೧೯೩೦ರ ದಶಕದ ವರೆಗೆ ವಿಜ್ಞಾನಿಗಳು ಅಷ್ಟಾಗಿ ಪ್ರಯತ್ನಿಸಲಿಲ್ಲ. ಈ ದಿಸೆಯಲ್ಲಿ ಸೋವಿಯೆತ್ ಸಂಶೋಧಕ ರ್ಯಾಕೋವ್ ಎಂಬುವರು ಭೂಕಂಪದ ಸಂಜ್ಞೆ ಸಂಕೇತಗಳನ್ನು ದಾಖಲು ಮಾಡಿಕೊಳ್ಳುವ ವಿಶಿಷ್ಟ ಭೂಕಂಪ ಮಾಪಕ ಒಂದನ್ನು ವಿನ್ಯಾಸಗೊಳಿಸಿದರು. ಈ ವಿಶಿಷ್ಟ ಭೂಕಂಪ ಮಾಪಕವು ತ್ಸುನಾಮಿಗಳ ಹಾವಳಿ ಹೆಚ್ಚಿರುವ ಸಮುದ್ರ ವಲಯಗಳಲ್ಲೆಲ್ಲಾ ಪರಿಶೀಲಿಸಿದಾಗ ಅದು ಈ ಪ್ರದೇಶದಲ್ಲಿ ವಿನಾಶಕಾರಿ ಅಲೆಗಳ ಉಗಮದ ಬಗ್ಗೆ ನೀಡಿದ ಮುನ್ಸೂಚನೆಗಳು ಶೇಕಡಾ ನೂರಕ್ಕೆ ನೂರು ನಿಜವಾದುವು. ಆದರೂ ತ್ಸುನಾಮಿಯ ಕಾರ್ಯಾಚರಣೆ ತಂತ್ರದ ಬಗ್ಗೆ ಸಂಪೂರ್ಣ ಜ್ಞಾನ ಕರಗತವಾಗುವವರೆಗೆ ಇಂತಹ ಭೂಕಂಪ ಮಾಪಕ ನೀಡುವ ಮಾಹಿತಿಯನ್ನೇ ಸಂಪೂರ್ಣವಾಗಿ ಆಧರಿಸುವುದು ಅಪಾಯಕರ ಎಂದು ವಿಜ್ಞಾನಿಗಳು ಹೇಳುತ್ತಾರೆ.

"ತ್ಸುನಾಮಿಗಳು ಸಂಭವಿಸಲು ಕಾರಣವಾಗುವ ವಿನಾಶಕಾರಿ ಅಲೆಗಳ ಉಗಮದ ಬಗ್ಗೆ ಸಮರ್ಪಕವಾಗಿ ಅಂದಾಜು ಮಾಡಬೇಕೇ ವಿನಾ ಭೂಗತ ಕಂಪನಗಳ ಕುರಿತು ಮುನ್ಸೂಚನೆ ನೀಡುವುದರಿಂದ ಹೆಚ್ಚು ಪ್ರಯೋಜನವಾಗುವುದಿಲ್ಲ. ಈ ಕಂಪನಗಳು ತ್ಸುನಾಮಿಗಳು ಸಂಭವಿಸಲು ಕಾರಣವಾಗಲೂಬಹುದು, ಇಲ್ಲದಿರಲೂಬಹುದು" ಎಂದು ಸೋವಿಯೆತ್ ವಿಜ್ಞಾನಿ ಡಾ. ಸೊಲೊವ್‌ಯೊವ್ ಅಭಿಪ್ರಾಯಪಡುತ್ತಾರೆ. ಸಮುದ್ರವಲಯದಲ್ಲಿ ಅತ್ಯಂತ ಅಪಾಯಕಾರಿ ತಾಣಗಳಲ್ಲಿ ವಿನಾಶಕಾರಿ ಸ್ವರೂಪದ ಅಲೆಗಳನ್ನು ಮೊದಲು ಗುರುತಿಸಬೇಕು. ಸಮುದ್ರ ಜಲದ ಮಟ್ಟವನ್ನು ಕರಾರುವಾಕ್ಕಾಗಿ ದಾಖಲು ಮಾಡಿಕೊಳ್ಳಬಲ್ಲ ಸಾಮರ್ಥ್ಯದ ಗ್ರಾಹಕಗಳನ್ನು ನೀರೊತ್ತಡದ ಸಮುದ್ರದಲ್ಲಿ ೨೦೦ ಮೀಟರ್ ಆಳದಲ್ಲಿ ಅಳವಡಿಸಬೇಕು. ನಂತರ ಈ ಗ್ರಾಹಕಗಳ ವ್ಯವಸ್ಥೆಯನ್ನು ಕರಾವಳಿಯಲ್ಲಿರುವ, ಅಪಾಯದ ಬಗ್ಗೆ ಎಚ್ಚರಿಕೆ ನೀಡುವ ನಿಲಯಗಳೊಂದಿಗೆ ಸಂಪರ್ಕವಿರುವ ಕೇಬಲ್‌ಗಳಿಗೆ ಜೋಡಿಸಬೇಕು, ಈ ರೀತಿ ಡಾ. ಸೊಲೊವ್‌ಯೊವ್ ಅವರು ಒಂದು ವಿಧಾನವನ್ನು ರೂಪಿಸಿದರು. ಸಮುದ್ರದಿಂದ ದೂರದಲ್ಲಿರುವ ಶಿಕೊಟಾನ್ ದ್ವೀಪವನ್ನು ಈ ಪ್ರಯೋಗಕ್ಕೆ ಆರಿಸಿಕೊಳ್ಳಲಾಯಿತು. ಅದಕ್ಕೆ ಅನುಕೂಲವಾಗುವಂತೆ ವಿಶಿಷ್ಟವಾದ ಜಲಭೌತ ವಿಜ್ಞಾನ ನಿರೀಕ್ಷಣಾಲಯವೊಂದನ್ನು ಈ ದ್ವೀಪದಲ್ಲಿ ಸ್ಥಾಪಿಸಲಾಯಿತು. ದ್ವೀಪದ ಅಂಚಿನಲ್ಲಿರುವ ಜಲ ಸೀಮೆಯಲ್ಲಿ ಮೊದಲ ಗ್ರಾಹಕವನ್ನು ಅಳವಡಿಸಿದರು. ತ್ಸುನಾಮಿ ಸಂಭವಿಸುವ ಬಗ್ಗೆ ಮಾಹಿತಿಗಳನ್ನು ಕರಾವಳಿಯಲ್ಲಿರುವ, ಅಪಾಯದ ಬಗ್ಗೆ ಎಚ್ಚರಿಕೆ ನೀಡುವ ನಿಲಯಗಳಿಗೆ ರವಾನಿಸಲು ಜಲತಳದಿಂದ ಕೇಬಲ್‌ಗಳನ್ನು ಅಳವಡಿಸಿದರು. ೧೯೭೪ರಲ್ಲಿ ಈ ಕಾರ್ಯ ನಡೆಯಿತು.

ಹಲವು ವರ್ಷಗಳವರೆಗೆ ಸಮುದ್ರ ಪ್ರದೇಶ ಶಾಂತವಾಗಿತ್ತು. ಗ್ರಾಹಕಗಳಿಂದ ಯಾವುದೇ ಸಂಕೇತಗಳೂ ಬರಲಿಲ್ಲ. ಆದರೆ ೧೯೮೦ರ ಫೆಬ್ರುವರಿ ೨೦ರಂದು ಶಿಕೊಟಾನಿನಿಂದ ೨೦ ಕಿಲೋ ಮೀಟರ್ ದೂರದ ಜಲ ಪ್ರದೇಶದಲ್ಲಿ ೧೧೪ ಮೀಟರ್ ಆಳದಲ್ಲಿ ಗ್ರಾಹಕಗಳು ತ್ಸುನಾಮಿ ಅಲೆಯೊಂದನ್ನು ಗುರುತಿಸಿ, ಆ ಬಗ್ಗೆ ಯೂಜ್ನೊ-ಸಖಲಿನ್‌ಸ್ಕ್ ನಿರೀಕ್ಷಣಾಲಯಕ್ಕೆ ಮುನ್ನೆಚ್ಚರಿಕೆ ಸೂಚನೆಗಳನ್ನು ರವಾನಿಸಿದುವು. ಈ ಮಾಹಿತಿಗಳು ನಿರೀಕ್ಷಣಾಲಯಕ್ಕೆ ತಲಪಿ ಒಂದು ಗಂಟೆ ಕಳೆಯುವುದರೊಳಗಾಗಿ ತ್ಸುನಾಮಿ ಅಲೆಗಳು, ಶಿಕೊಟಾನ್ ದ್ವೀಪದ ಕರಾವಳಿಯನ್ನು ಸಮೀಪಿಸಿದುವು. ಆದರೆ ಅಲೆಗಳು ಅಂತಹ ವಿನಾಶಕಾರಿ ಸ್ವರೂಪದವಾಗಿರಲಿಲ್ಲ. ಒಟ್ಟಿನಲ್ಲಿ ಅಲೆಗಳ ಉಗಮದ ಬಗ್ಗೆ ಮಾಹಿತಿ ನೀಡುವ ಈ ಸ್ವಯಂ ದಾಖಲೆ ಸಾಧನವು ಪೂರ್ವಭಾವಿಯಾಗಿ ಖಚಿತ ಮುನ್ಸೂಚನೆ ನೀಡಿತು ಎಂಬುದೇ ಇಲ್ಲಿ ಗಮನಾರ್ಹ ವಿಚಾರ.

✶



# ಮಗುವಿಗೆ ತಾಯಿಯ ಹಾಲು ಶ್ರೇಷ್ಠ

**ಮಗುವಿಗೆ ಮೊಲೆಹಾಲು ಶ್ರೇಷ್ಠ, ಏಕೆ?**

ಮೊಲೆಹಾಲು ಶುದ್ಧವಾಗಿದೆ. ಬ್ಯಾಕ್ಟೀರಿಯಾದಿಂದ ಮುಕ್ತವಾಗಿದೆ, ನೂರಕ್ಕೆ ನೂರು ಮಗುವಿನ ಪಚನ ವ್ಯವಸ್ಥೆಗೆ ಸರಿಹೊಂದುವಂತಹುದಾಗಿದೆ. ತಾಯಿಯ ಹಾಲನ್ನು ಕುಡಿಯುವ ಮಗು ಅನೇಕ ರೋಗಗಳ ವಿರುದ್ಧ ತಾಯಿಯಲ್ಲಿರುವ ಸೋಂಕು. ರಕ್ಷೆಯ ಕ್ಷಮತೆಯನ್ನು ಪಡೆಯುತ್ತಾನೆ, ಹಾಗೂ ಅವನ ಅಕ್ಕರೆಯ ಮತ್ತು ಸುರಕ್ಷೆಯ ಭಾವನೆ ತೃಪ್ತಗೊಳ್ಳುತ್ತದೆ. ಇಂಥ ಮಗು ಜಠರದ ತೊಂದರೆ ಮತ್ತು ಚರ್ಮದ ಮೇಲಿನ ಕೆಂಪುಗುಳ್ಳೆಗಳಿಂದ ಬಳಲುವುದಿಲ್ಲ.

**3 ತಿಂಗಳ ತರುವಾಯ ಡಾಕ್ಟರರು ಫೆರೆಕ್ಸ್ ಶಿಫಾರಸು ಮಾಡುತ್ತಾರೆ.**

ಕ್ರಮೇಣ ಘನ ಆಹಾರವನ್ನು ಪ್ರಾರಂಭಿಸಲು ಯೋಗ್ಯವಾದಂತಹ ಆಹಾರವೇ ಫೆರೆಕ್ಸ್. ಅದರಲ್ಲಿ ಪ್ರೋಟೀನ್ಸ್, ಕಾರ್ಬೋಹೈಡ್ರೇಟ್ಸ್, ಫ್ಯಾಟ್ಸ್ (ಕೊಬ್ಬು), ಕ್ಯಾಲ್ಸಿಯಮ್, ಫಾಸ್ಫರಸ್ ಮತ್ತು ವಿಟಮಿನ್‌ಗಳಿವೆ. ಫೆರೆಕ್ಸ್ ಕಬ್ಬಿಣ ಸತ್ವದಿಂದಲೂ ಸಮೃದ್ಧವಾಗಿದೆ. ಮಗುವಿನ ಸರ್ವಾಂಗೀಣ ಬೆಳವಣಿಗೆಗೆ ಫೆರೆಕ್ಸ್ ಆದರ್ಶ ಘನ ಆಹಾರವಾಗಿದೆ.




**ಉಚಿತ!** ಮಗುವಿನ ಮೊದಲ ವರ್ಷದ ಕುರಿತಾದ ಪುಸ್ತಿಕೆ—ಇದರ ಪ್ರತಿಯನ್ನು ಉಚಿತವಾಗಿ ಪಡೆಯಲು, ಅಂಚೆವೆಚ್ಚಕ್ಕಾಗಿ 50 ಪೈಸೆ ಸ್ಟ್ಯಾಂಪ್‌ನೊಂದಿಗೆ ಬರೆಯಿರಿ:)

**ಪಿ. ಓ. ಬಾಕ್ಸ್ ನಂ. 19119, (FAR 93 B), ಬೊಂಬಾಯಿ- 400 025.**

**ಡಾಕ್ಟರರು ಶಿಫಾರಸು ಮಾಡುತ್ತಾರೆ–ಫೆರೆಕ್ಸ್.**
**ಮಗುವಿನ ಆದರ್ಶ ಘನ ಆಹಾರ– ಶೀಘ್ರ ಸರ್ವಾಂಗೀಣ ಬೆಳವಣಿಗೆಗಾಗಿ**

CASGLF-11-163 KAN

# ಸುಭಾಷಿತಗಳು

ಯಾವನ್ನ ಯೌವನಪ್ರಾಪ್ತಃ ಶಿಕ್ಷ್ಯತೇ ತಾವದಾತ್ಮಜಃ ।
ವ್ಯತೀತಕಾಲೇ ಕೇದಾರೇ ಕರ್ಷಣೈಃ ಕಿಂ ಕರಿಷ್ಯತೇ ॥

ಮಗನಿಗೆ ಯೌವನ ಬರುವುದರೊಳಗೆ ಶಿಕ್ಷಣವನ್ನು ಕೊಡಬೇಕು. ಕಾಲ ಮೀರಿದ ಮೇಲೆ ಗದ್ದೆಯನ್ನು ಉತ್ತರೆ ಏನಾದೀತು ?

ಶನೈಃಶನೈರ್ವಿನೀಯಂತೇ ತರ್ಜನೈಸ್ತೋಷಣೈರಪಿ ।
ನವಾ ಇವಾಶ್ವಾಃ ಕುಶಲೈರ್ಬಾಲಾಶ್ಚಪಲಚೇತಸಃ ॥

ಹೊಸ ಕುದುರೆಗಳನ್ನು ಪಳಗಿಸುವಂತೆ, ಚಪಲರಾದ ಬಾಲಕರನ್ನು ಕೆಲವು ವೇಳೆ ಮುದ್ದಿಸುವುದು, ಕೆಲವು ವೇಳೆ ಸಂತೋಷಗೊಳಿಸುವುದು — ಈ ಕ್ರಮದಿಂದ ಬುದ್ಧಿಶಾಲಿಗಳು ಪಳಗಿಸಬೇಕು.

ಶಿಶೋಃ ಕ್ರೀಡನಕೈರ್ವೇಶ್ಮ ಕಲಾಲಾಪೈರಪಿ ಶ್ರುತಿಃ ।
ವಪುರಂಗರಜೋಭಿಶ್ಚೇನ್ನಾಕುಲಂ ಜಗದಾಕುಲಮ್ ॥

ಮಗುವಿನ ಆಟದ ಸಾಮಾನುಗಳಿಂದ ಮನೆಯೂ ಅದರ ಮುದ್ದು ಮಾತುಗಳಿಂದ ಕಿವಿಯೂ ಮಗುವಿನ ಮೈಗೆ ಹತ್ತಿದ ಧೂಳಿನಿಂದ ದೇಹವೂ ವ್ಯಾಪ್ತವಾಗದಿದ್ದರೆ ಜಗತ್ತು ನೀರಸವಾಗಿ ವ್ಯಾಕುಲಗೊಳ್ಳುವುದು.

ವನಾನಿ ದಹತೋ ವಹ್ನೇಃ ಸಖಾ ಭವತಿ ಮಾರುತಃ ।
ಸ ಏವ ದೀಪನಾಶಾಯ ಕೃಶೇ ಕಸ್ಯಾಸ್ತಿ ಸೌಹೃದಮ್ ॥

ಕಾಡುಗಳನ್ನು ಸಹಿಸುವ ಕಿಚ್ಚಿಗೆ, ಗಾಳಿ ಸ್ನೇಹಿತನಾಗುತ್ತಾನೆ. ಆ ಗಾಳಿಯೇ ದೀಪವನ್ನಾರಿಸುತ್ತಾನೆ. ಬಡವರಲ್ಲಿ ಯಾರಿಗೆ ತಾನೇ ಸ್ನೇಹವಿರುತ್ತದೆ?

# ನೋವು!

**ಮಾಧವ ನಾ. ಮಹಿಷಿ**

ನೋವು. ನೋವು ಪ್ರಾಣಿಮಾತ್ರರಲ್ಲಿ ಯಾರನ್ನೂ ಬಿಟ್ಟಿಲ್ಲ.
ಹಾಗೆ ನೋಡಿದರೆ ನೋವಿನಿಂದ ಮುಕ್ತರಾಗಲೆಂದೇ
ಅನೇಕರು ಯೋಗದ ಬೆಂಬತ್ತಿದರು. ಸಮ್ರಾಟರು, ಸಾಧು-ಸಂತರು,
ಬಡವ-ಬಲ್ಲಿದರು ಎಂಬ ಯಾವ ಭೇದವೂ ಇಲ್ಲದೆ ಎಲ್ಲರೂ ನೋವಿನೆದುರು
ಮಂಡೆಯೂರಿದ್ದಾರೆ. ಆದರೆ ನೋವೇ ಇಲ್ಲದ ಮನುಷ್ಯ ಸುಖಿಯೆ ?
ನೋವಿನ ಅಭಾವವೇ ಸುಖವೆಂದು ಹೇಳಬಹುದೆ?......
ಆ ಮನುಷ್ಯ ತನಗೆ ನೋವೇ ಆಗುತ್ತಿಲ್ಲವೆಂದು ಕಂಗೆಟ್ಟು ಆಸ್ಪತ್ರೆ ಸೇರಿದ್ದ !
೧೯೫೭ ರ ಜನೆವರಿಯಲ್ಲಿ ಆಸ್ಪತ್ರೆಯಲ್ಲೊಂದು ದಿನ......

"ಅಲ್ಲಾ, ಮಿಸ್ಟರ್, ನಿಮಗಾದದ್ದಾದರೂ ಏನು? ಬೆಳಗ್ಗೆದ್ದು ಈ ರೀತಿ ಹಣೆಗೆ ಕೈ ಹಚ್ಚಿಕೊಂಡು ಕೂತದ್ದೇಕೆ? ನಿಮ್ಮಂಥ ಗ್ರಾಜ್ಯುಯೇಟೇ ಈ ತರಹ ಮಾಡಿದರೆ ಅವರಿವರ ಪಾಡೇನು! ನಿಮ್ಮ ಬದಿಗಿನ ಕಾಟಿನ ಮೇಲಿರೋ ಮನುಷ್ಯನನ್ನ ನೋಡಿರಿ, ಆತ ನಿರಕ್ಷರ ಕುಕ್ಷಿ. ಅಕ್ಷರಶತ್ರು ಎಂದು ಬೇಕಾದರೂ ಹೇಳಬಹುದು; ಆದರೂ ಮುಗಿಲೇ ಕಡಿದು ತಲೆಮೇಲೆ ಬಿದ್ದವರಂತೆ ಆತ ಎಂದೂ ಮಾಡಿಲ್ಲ. ಆತನು ಈ ಆಸ್ಪತ್ರೆಗೆ ಬಂದೇ ಎರಡು ತಿಂಗಳಾಗುತ್ತ ಬಂತು"—ಸಿಸ್ಟರ್ ನನ್ನನ್ನುದ್ದೇಶಿಸಿ ಅರ್ಧ ಗದರಿಸುವ, ಅರ್ಧ ಮನ-ವೊಲಿಸುವ ಧಾಟಿಯಲ್ಲಿ ಹೇಳಿದಳು.

ತಟ್ಟನೆ ಉತ್ತರಿಸುವ ಮನಃಸ್ಥಿತಿಯಲ್ಲಿ ನಾನಿರಲಿಲ್ಲ. ಅದು ಮುಂಬಯಿ ಮಹಾನಗರದಲ್ಲಿ ಎಲ್ಲಕ್ಕೂ ದೊಡ್ಡದೆಂದು ಹೇಳಲಿಕ್ಕಾಗದಿದ್ದರೂ, ಸಾಕಷ್ಟು ದೊಡ್ಡದು ಮತ್ತು ಕಾರ್ಯಕ್ಷಮತೆಯಲ್ಲಿ ಸಾರ್ವಜನಿಕ ಆಸ್ಪತ್ರೆಗಳಲ್ಲೇ ಮಿಗಿಲಾದದ್ದೆಂದು ಹೆಸರಾದ ಕೆ. ಈ. ಎಂ. ಆಸ್ಪತ್ರೆಯ ವಾರ್ಡ್ ನಂ. ೧೦. ನಾನು ಅಲ್ಲಿಗೆ ಬಂದು ಆಗಲೆ ನಾಲ್ಕು ದಿನಗಳು ಸಂದಿದ್ದವು. ನನ್ನ ಬದಿಗಿನ ಕಾಟಿನ ಮೇಲಿದ್ದ ವ್ಯಕ್ತಿ ಎರಡು ತಿಂಗಳಿಂದ ಇಲ್ಲಿ ಇನ್ನೂ ಕೊಳೆಯುತ್ತಿರಬೇಕಾದರೆ ನನ್ನ ಹಣೆಯಲ್ಲಿ ಎಷ್ಟು ದಿನ ಬರೆದಿದೆಯೋ ಎಂಬ ಹೊಸ ಭೀತಿ ನನ್ನನ್ನು ಆವರಿಸಿತು. ನಾನಿನ್ನೂ ಗಂಭೀರವಾದದ್ದನ್ನು ಕಂಡ

(ಕೃಪೆ: ಆಕಾಶವಾಣಿ, ಧಾರವಾಡ)

ಸಿಸ್ಟರ್ ನನ್ನನ್ನು ಅಕ್ಷರಶಃ ಭುಜ ಹಿಡಿದು ಥಲ್ಲಿಸುತ್ತಲೇ ನುಡಿದಳು:"ರೀ, ನೀವು ವಿದ್ಯಾವಂತರು ಹೀಗೆ ಕೂಡೋದಲ್ಲ. ವಾರ್ಡಿನಲ್ಲಿ ಅತ್ತಿತ್ತ ಅಡ್ಡಾಡಿ ಇತರ ಪೇಶಂಟುಗಳ ಸುಖ-ದುಃಖ ವಿಚಾರಿಸಿ. ಅವರಿಗೆ ಸಮಾಧಾನ ಹೇಳಬೇಕಾದಂಥ ನೀವು ಮತ್ತೆ ಹಣೆಗೆ ಕೈ ಹಚ್ಚಿದರೆ ನನಗೆ ಕೋಪ ಬಂದು ಬಿಟ್ಟೀತು."

ನಾನು ಆ ಕ್ಷಣಕ್ಕೆ ಮುಖ ಮೇಲೆತ್ತಿ ನಸುನಕ್ಕೆ. ಆಕೆಗೆ ಸಮಾಧಾನವಾಗಿರಬೇಕು. ನನ್ನ ಬೆನ್ನು ತಟ್ಟಿ ಮುಂದಿನ ಕಾಟಿಗೆ ನಡೆದಳು. ಆ ಕ್ಷಣಕ್ಕೆ ನನ್ನ ಮನಸ್ಸಿನಲ್ಲಿ ಚೆಂಗನೆ ಹತ್ತಾರು ಪ್ರಶ್ನೆಗಳು ಎದ್ದು ನಿಂತವು. ನಾನಾಗ ೨೪ರ ಉದ್ಯೋಗವಿಲ್ಲದ ಯುವಕ. ಹರೆಯ ಮೆಳೆದತ್ತ ಮನಸ್ಸು ನುಗ್ಗುವ ವಯಸ್ಸು. ಸಾಧಾರಣ ನನ್ನ ವಯಸ್ಸಿನವಳೇ ಆದ ಒಂದು ಹೆಣ್ಣು- ಬಿಳಿ ಸ್ಕರ್ಟಿನಲ್ಲಿದ್ದರೇನಾಯಿತು, ಹೆಣ್ಣೆಂಬುದು ಸುಳ್ಳಲ್ಲವಲ್ಲ- ನನ್ನನ್ನು ಇಷ್ಟು ಹತ್ತಿರದಿಂದಲೇ ಹಿಡಿದು ಥಲ್ಲಿಸಿದಾಗಲೂ ನಾನು ರೋಮಾಂಚಿತನಾಗಲಿಲ್ಲವಲ್ಲ? ಅಂದರೆ ನಾನು ಷಂಡನೆ? ನಿಮಿಷಾರ್ಧದಲ್ಲೆ ಕಾಲೇಜಿನ ನೆನಪು ಮರುಕಳಿಸಿ ನೆಮ್ಮದಿ ನೀಡಿತು. ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಬಿ. ಎ. ಓದುತ್ತಿದ್ದಾಗ ಜ್ಯೂನಿಯರ್, ಸೀನಿಯರ್ ವಿದ್ಯಾರ್ಥಿಗಳೆಲ್ಲ ಕಂಪಲ್ಸರಿ ಇಂಗ್ಲಿಷ್ ಪೀರಿಯಡ್ಡಿನಾಗಿ ಒಂದೇ ಹಾಲಿನಲ್ಲಿ ಕೂಡಬೇಕಾಗುತ್ತಿತ್ತು. ಆಗ ಸೀರೆಯುಟ್ಟ ಸಹಪಾಠಿಗಳೆಲ್ಲ ಪ್ರತ್ಯೇಕ ಡೆಸ್ಕುಗಳನ್ನೇ ಆಶ್ರಯಿಸುತ್ತಿದ್ದರೆ ಸ್ಕರ್ಟ್-ಧಾರಿ ಗೋವನ್ ಯುವತಿಯರು ನಮ್ಮೊಂದಿಗೇ ಸೇರಿ ಒಟ್ಟಿಗೇ ಕೂತು ಬಿಡುತ್ತಿದ್ದರು. ಒಮ್ಮೊಮ್ಮೆ ತೊಡೆಗೆ ತೊಡೆ ಅಂಟಿಕೊಂಡು ಕುಳಿತಾಗಲೂ ನಾನು ಹೆಣ್ಣಿನ ಬದಿಗೆಯೇ ಕುಳಿತಿದ್ದೇನೆಂಬ ಕಲ್ಪನೆ ಕೂಡ ಬರುತ್ತಿರಲಿಲ್ಲ. ಆದರೆ ಅದೇ ಸೀರೆಯುಟ್ಟ ನೀರೆಯ ಸೆರಗಿನ ಚುಂಗು ತಾಗಿದರೂ ಮೈಯೆಲ್ಲ ವಿದ್ಯುತ್ಸಂಚಾರವಾಗುತ್ತಿತ್ತು. ಮತ್ತೆತ್ತಲೋ ಹರಿಯುತ್ತಿದ್ದ ಮನಸ್ಸನ್ನು ನಿಯಂತ್ರಣಕ್ಕೆ ತಂದುಕೊಂಡು ಗೆಳೆಯ ತಂದುಕೊಟ್ಟಿದ್ದ ಅಸಕ್ಯ ಕಾಮು ಬರಿಯಲ್ಲಿ ನನ್ನ ಗಮನವನ್ನು ಕೇಂದ್ರೀಕರಿಸಲು ಯತ್ನಿಸಿದೆ. ಆದರೂ ಈಗ ಮನಸ್ಸು ನನ್ನನ್ನು ನಮ್ಮೂರ ಕಡೆಗೆ ಸೆಳೆಯುತ್ತೊಡಗಿತು. ನನ್ನ ತಾಯಿ ತಂದೆಗಳಿಗೆ ನಾನು ಆಸ್ಪತ್ರೆ ಸೇರಿದ ವಾರ್ತೆಯನ್ನು ಕಕ್ಕ ತಲುಪಿಸಿದ್ದರು. ಒಂದೆರಡು ದಿನಗಳಲ್ಲೇ ನನ್ನನ್ನು ನೋಡಲು ಅವರು ಬರಬಹುದೆಂಬ ನಿರೀಕ್ಷೆ, ಯಾವಾಗ ಬಂದಾರೆಂಬ ತವಕ ನನ್ನನ್ನು ಮುತ್ತುತ್ತಿದ್ದಂತೆಯೆ ಯಾರೋ ನನ್ನ ಬೆನ್ನು ತಟ್ಟಿ, "ಭಯ್ಯಾ" ಅಂದ ಶಬ್ದ. ಆಶ್ಚರ್ಯದಿಂದ ಹೊರಳಿ ನೋಡಿದೆ. ನಾಲ್ಕು ದಿನಗಳಿಂದಲೂ ನಾನು ನೋಡುತ್ತಿದ್ದ ನನ್ನ ಎಡ ಬದಿಯ ಕಾಟನ ಪೇಶಂಟ್. ಅದುವರೆಗೆ ಅವನು ಮೂಕನಾಗಿರಬೇಕೆಂದೇ ನನ್ನ ಕಲ್ಪನೆಯಾಗಿತ್ತು; ಈಗ ನೋಡಿದರೆ ಅವನು ಎರಡಕ್ಷರಗಳ ಪೂರ್ತಿ ಶಬ್ದವನ್ನು ತನ್ನ ಮುಖದಿಂದಲೇ ಹೊರಡಿಸಿದ್ದಾನೆ; ಈ ಅಂಶವನ್ನು ಖಚಿತಪಡಿಸಲೆಂದೋ ಏನೋ ಆತ ಪುನಃ "ಭಯ್ಯಾ" ಅಂದ.

ಇಂತು ನನ್ನ ಅವನ ಪರಿಚಯಕ್ಕೆ ಮೊದಲಿಟ್ಟಿತು. ಅವನೂ ಸಾಧಾರಣ ನನ್ನ ವಯಸ್ಸಿನವನೇ. ಆದರೆ ಅವನಿಗೆ ನನಗೆ ತಿಳಿದ ಭಾಷೆಗಳಾದ ಕನ್ನಡ, ಇಂಗ್ಲೀಷ್ ಮರಾಠಿಗಳ ಗಂಧವೂ ಇರಲಿಲ್ಲ. ಉತ್ತರ ಪ್ರದೇಶದ ತೀರ ಹಿಂದುಳಿದ ಭಾಗದಲ್ಲಿಯ ಒಂದು ಕುಗ್ರಾಮದಿಂದ ಬಂದವ. ಹಿಂದಿ ಅವನ ಮಾತೃಭಾಷೆಯಾಗಿದ್ದರೂ ನನಗಾಗ ಅಷ್ಟಿಷ್ಟು ತಿಳಿಯುತ್ತಿದ್ದದ್ದು ಸಿನಿಮಾ ಹಿಂದಿ ಮಾತ್ರ. ಅವನ ಮಾತಿಗೂ ರಜತ ಪರದೆಯ ಭಾಷೆಗೂ ಅಜಗಜಾಂತರ. ಅವನನ್ನು ಅರ್ಥಮಾಡಿಕೊಳ್ಳಬೇಕಾಕಾದರೆ ನಾನು ಪಟ್ಟಷ್ಟು ಶ್ರಮವನ್ನು ನಾನು ಇನ್ನಾವುದಕ್ಕೂ ಪಟ್ಟಿರಲಿಕ್ಕಿಲ್ಲ. ಆದರೂ ಮುಂದಿನ ನಾಲ್ಕಾರು ದಿನಗಳಲ್ಲಿ ಆತ ಆ ಆಸ್ಪತ್ರೆಯಲ್ಲಿ ನನ್ನ ಸಮೀಪದ ಸ್ನೇಹಜೀವಿಯಾಗಿ ಮಾರ್ಪಟ್ಟ. ಅವನ ಮುಗ್ಧ ಮುಖ, ಅದಕ್ಕಿಂತಲೂ ಮುಗ್ಧ ಮಾತು-ಯೋಚನೆಗಳು ಅವನೊಬ್ಬ, ಈ ಜಗತ್ತಿನೊಂದಿಗೆ ಜಗಳಕ್ಕಿಳಿಯಲಿಕ್ಕಾಗದ ನಿಷ್ಪಾಪಿ ಎಂಬುದನ್ನು ಸಾರಿ ಸಾರಿ ಹೇಳುತ್ತಿದ್ದುವು.

ಮೆಲ್ಲ ಮೆಲ್ಲನೆ ಅವನ ವೈಯಕ್ತಿಕ ಸಮಸ್ಯೆಗಳಲ್ಲಿ ನನಗೆ ಆಸಕ್ತಿಯುಂಟಾಗತೊಡಗಿತು.

ನನ್ನ ಪ್ರಶ್ನೆಗಳು ಅವನಿಗೆ ಒಮ್ಮೆಲೆ ಅರ್ಥವಾಗುತ್ತಿರಲಿಲ್ಲವಾದರೂ ಕೇಳುತ್ತಿದ್ದ. ತಿಳಿದಾಗ ನಸುನಕ್ಕು ತಿಳಿಯಿತೆಂಬುದನ್ನು ಸೂಚಿಸುತ್ತಿದ್ದ. ನನ್ನ ಗೆಳೆಯರು ನಿತ್ಯ ತಂದುಕೊಡುತ್ತಿದ್ದ ಮೋಸಂಬಿ ಹಣ್ಣುಗಳು ನನ್ನ, ಅವನ ಸ್ನೇಹವನ್ನು ಹುರಿಪಡಿಸಿದುವು.

ಆದರೂ ಅವನ ವ್ಯಾಧಿ ನನಗೆ ಬಿಡಿಸಲಾರದ ಒಗಟಾಗಿಯೇ ಉಳಿದಿತ್ತು. ಸೂಜಿ ಚುಚ್ಚಿದರೂ ಅವನಿಗೆಷ್ಟೂ ನೋವಾಗುತ್ತಿರಲಿಲ್ಲ. ಅವನ ಮೈಯೊಗಲು ಸ್ಪರ್ಶಜ್ಞಾನವನ್ನೇ ಕಳೆದುಕೊಂಡುಬಿಟ್ಟಿತ್ತು. ನಾನು ಆರ್ಟ್ಸ್ ಪದವೀಧರನಾಗಿದ್ದರೂ ಸುತ್ತಲಿನ ಹತ್ತಾರು ಬಗೆಯ ವಿಷಯಗಳಲ್ಲಿ ಎಂದಿನಿಂದಲೂ ಆಸಕ್ತಿಯನ್ನು ಜಾಗ್ರತವಾಗಿಸಿಕೊಂಡವನೇ. ಆಗಿದ್ದುದರಿಂದ ಇದು ಹೇಗೆಂದು ಡಾಕ್ಟರರನ್ನು ಕೇಳಬೇಕೆಂಬ ಕುತೂಹಲವೂ ನನ್ನಲ್ಲಿತ್ತು. (ಪ್ರಾಯಶಃ ಆಗಿನ ನನ್ನ ಅಸ್ವಾಸ್ಥ್ಯಕ್ಕೆ ಕಾರಣ ನನ್ನ ಈ ಕುತೂಹಲವೇ ಆಗಿರಬೇಕು). ಆದರೆ ನಾನೇ ಪೇಶಂಟ್ ಆಗಿರುವಾಗ ನನ್ನ ಪ್ರಶ್ನೆಯನ್ನು ಅಧಿಕ ಪ್ರಸಂಗನೆಂದು ಡಾಕ್ಟರು ಭಾವಿಸಿದರೆ? ವಾರದಲ್ಲಿ ಎರಡು ದಿನ ಹಿರಿಯ ಡಾಕ್ಟರು ಬರುತ್ತಿದ್ದರು. ಅದೇಕೋ ಅವರನ್ನು ಕಂಡೊಡನೆಯೇ ನನ್ನ ಗುಟ್ಟನ್ನೇ ಅವರೊಡನೆ ಹಂಚಿಕೊಂಡು ಬಿಡಬಹುದೆಂಬಷ್ಟರ ಮಟ್ಟಿಗೆ ವಿಶ್ವಾಸ ಮೂಡುತ್ತಿತ್ತು. ಆದರೆ ನನ್ನ ಕುರಿತು, ನನ್ನ ಚರಿತ್ರೆಯ, ಚಾರಿತ್ರ್ಯದ ಕುರಿತು ಪ್ರಶ್ನೆ- ಉಪಪ್ರಶ್ನೆಗಳ ಸರಮಾಲೆಯನ್ನು ಅವರೇ ಹೆಣೆಯುತ್ತಿದ್ದುದರಿಂದ ನನ್ನ ಸ್ನೇಹಿತನ ವಿಷಯ ಹಿಂದುಳಿದುಬಿಡುತ್ತಿತ್ತು. ಆದರೂ ಅವನಲ್ಲಿ ನನ್ನ ಕುತೂಹಲ ಬೆಳೆಯುತ್ತಲೇ ನಡೆದು ಹಲವಾರು ಬಗೆಯಲ್ಲಿ ಮಾಹಿತಿಯನ್ನು ನಾನು ಸಂಗ್ರಹಿಸಿದೆ.

ಹಿಮಾಲಯದ ಅಡಿಯಲ್ಲಿ ಕಿರಿಯಗಲವಾದ ಬಯಲಲ್ಲಿ ಆತನ ಹಳ್ಳಿ. ಅವನಿಗೆ ಸ್ವಂತದ್ದೇ ಆದ ಒಂದು ಎಕರೆ ಜಮೀನಿತ್ತು. ಎರಡು ವರ್ಷಗಳ ಹಿಂದಷ್ಟೇ ಮದುವೆಯಾಗಿ ಹೊಸದಾಗಿ ಮನೆ ಹೂಡಿದವನು. ಆರು ತಿಂಗಳ ಹಿಂದಷ್ಟೇ ತಾಯಿ ತೀರಿಕೊಂಡಾಗಲೂ ಹರೆಯದ ಹೆಂಡತಿ ಆ ದುಃಖವನ್ನು ಮರೆಸಿದ್ದಳು. ಒಂದು ಸಂಜೆ ಹೊಲದಲ್ಲಿ ಕೆಲಸ ಮುಗಿಸಿಕೊಂಡು ಗಂಡ ಹೆಂಡಿರಿಬ್ಬರೂ ಮರಳುತ್ತಿದ್ದಾಗ ಅವನಿಗಿಂತ ನಾಲ್ಕು ಹೆಜ್ಜೆ ಹಿಂದಿದ್ದ ಅವನ ಹೆಂಡತಿಯ ಮೇಲೆ ಒಮ್ಮೆಲೆ ಭಯಂಕರ ಹುಲಿಯೊಂದು ಎರಗಿತು. ಆಕೆ ಚೀರುವಷ್ಟರಲ್ಲೇ ಅವಳ ಕತ್ತನ್ನೇ ಕಚ್ಚಿ ಹಿಡಿದು ಎಳೆ ಎಳೆ ಒದ್ದಾಡುತ್ತಿದ್ದಾಕೆಯನ್ನು ಬಳಿಯ ಕಾಡಿನೊಳಕ್ಕೆ ಎಳೆದೊಯ್ದಿತು. ಆತ ಸರ್ರನೆ ಹಿಂದೆ ಹೊರಳಿದ. ಆದರೆ ಏನಾಯಿತೆನ್ನುವಷ್ಟರಲ್ಲೇ ಹುಲಿ ಅವನ ಕಣ್ಣೆದುರೇ ಆಕೆಯನ್ನು ಅವನ ಅರಗಿಣಿಯನ್ನು-ಎಳೆದುಕೊಂಡು ಕಾಡಿನಲ್ಲಿ ಕಣ್ಮರೆಯಾಗಿಬಿಟ್ಟಿತು. ಅವನಿಗೆ ಕೂಗುವುದಕ್ಕೆ ಬಾಯಿ ಬರಲಿಲ್ಲ. ಅದೇನೋ ಒಂದು ಬಗೆಯ ಭಯಾನಕ ಶೀತಲ ಪ್ರವಾಹ ಮೈಯೆಲ್ಲ ಹರಿದು ಹೋದಂತೆನಿಸಿತು. ಅಂತಲ್ಲೇ ಆತ ಕುಸಿದು ಬಿದ್ದ.

ಮರುದಿನ ಬೆಳಿಗ್ಗೆ ಅರ್ಧ ಮೂರ್ಛೆ ಎಚ್ಚರತಪ್ಪಿದಂತಿದ್ದ ಅವನನ್ನು ಯಾರು ಯಾರೋ ಹೊತ್ತು ಮನೆಗೆ ತಂದರು. ಹಳ್ಳಿಯ ಪಂಡಿತರ ಮದ್ದು ಮಂತ್ರಗಳೆಲ್ಲ ಮುಗಿದರೂ ಅವನ ಬಾಯಲ್ಲಿ ಮಾತು ಇಲ್ಲ, ಕಣ್ಣಲ್ಲಿ ನೀರೂ ಇಲ್ಲ. ಆದರೆ ಇವೆಲ್ಲಕ್ಕಿಂತ ಹೆಚ್ಚಾಗಿ ತನಗೆ ಸ್ಪರ್ಶಜ್ಞಾನವೇ ಆಗುತ್ತಿಲ್ಲವೆಂಬುದು ಆ ಕಾಲಕ್ಕೆ ಅವನಿಗೂ ತಿಳಿದಿರಲಿಲ್ಲ. ಮುಂದೆ ಹತ್ತಿರದ ದೊಡ್ಡ ಊರಿನಿಂದ ಡಾಕ್ಟರರೊಬ್ಬರು ಬಂದು ಚಿಕಿತ್ಸೆ ನೀಡತೊಡಗಿದ ನಂತರ ಕೆಲ ದಿನಗಳಲ್ಲಿ ಮಾತೇನೋ ಬಂತು, ಆದರೆ ಆಗಲೇ ಅವನಿಗೆ ತನ್ನ ವಿಚಿತ್ರ ಅವಸ್ಥೆಯ ಜ್ಞಾನೋದಯವೂ ಆಯಿತು. ಚಾಕು ಹತ್ತಿ ಅವನ ಕೈಗೆ ರಕ್ತ ಬಂತಾದರೂ ಅದರ ನೋವಿನ ಬಾಧೆ ಅವನಿಗಾಗುತ್ತಿರಲಿಲ್ಲ. ಡಾಕ್ಟರರಿಗೆ ಕೂಡ ಈ ಅವಸ್ಥೆಯ ತಳ ಬುಡ ಯಾವುದೂ ಅರ್ಥವಾಗಲಿಲ್ಲ. ಜಿಲ್ಲಾ ಆಸ್ಪತ್ರೆಗೆ ಅವನನ್ನು ಕೊಂಡೊಯ್ಯುವಂತೆ ಸಲಹೆ ನೀಡಿ ಅವರು ಹೊರಟುಹೋದರು. ಜಿಲ್ಲಾ ಆಸ್ಪತ್ರೆಗೆ ಬಂದು ದಾಖಲಾದದ್ದೂ ಆಯಿತು. ಒಂದು ವಾರ ಏನೇನೋ ಪರೀಕ್ಷೆ ಮಾಡಿ ತಮಗೆ ಬಗೆಹರಿಯದ ಪ್ರಕರಣ

ವೆಂದೂ ಬೇಕಾದರೆ ಲಖನೋವಿನ ದೊಡ್ಡ ಆಸ್ಪತ್ರೆಗೆ ಹೋಗಿ ನೋಡಬಹುದೆಂದೂ ಹೇಳುವುದರ ಜೊತೆಯೇ ಅದರಿಂದೇನಾದರೂ ಉಪಯೋಗ ಆದೀತೆಂಬ ಭರವಸೆಯನ್ನು ಮಾತ್ರ ಅಲ್ಲಿಯ ಡಾಕ್ಟರರು ನೀಡಲಿಲ್ಲ.

ಆ ಸುಮಾರಿಗೆ ಅವನ ಬಾಲ್ಯ ಸ್ನೇಹಿತನೊಬ್ಬ ಅವನನ್ನು ಕಾಣಲು ಆಸ್ಪತ್ರೆಗೆ ಬಂದ, ಈ ಸ್ನೇಹಿತ ಜೀವನೋಪಾಯಕ್ಕಾಗಿ ಲಾರಿ ಡ್ರೈವರರಾಗಿದ್ದರಿಂದ ತಿಂಗಳಲ್ಲಿ ಎರಡು ಮೂರು ಬಾರಿಯಾದರೂ ಮುಂಬಯಿಗೆ ಹೋಗಲೇಬೇಕಾಗುತ್ತಿತ್ತು. ಮುಂಬಯಿಯಲ್ಲಿಯ ದೊಡ್ಡ ದೊಡ್ಡ ಆಸ್ಪತ್ರೆಗಳು, ಮಹಾ ಮಹಾ ಡಾಕ್ಟರುಗಳು ಅಂದರೆ ಧನ್ವಂತರಿಯ ಅಪರಾವತಾರವೆ ಎಂದವನ ನಂಬುಗೆ. ಆತ ಗೆಳೆಯನ ಮನವೊಲಿಸಿ, ಅದೇ ವಾರ ತಾನು ಮುಂಬಯಿಗೆ ಹೋಗುವಾಗ ಕರೆದೊಯ್ಯುವುದಾಗಿ ಆಶ್ವಾಸನವಿತ್ತ.

ಲಾರಿ ಡ್ರೈವರ್ ಮಿತ್ರನೊಂದಿಗೆ ಮೂರು ದಿನ ಟ್ರಕ್ಕಿನಲ್ಲೇ ಪ್ರವಾಸ ಮಾಡಿ ಈ ಮುಗ್ಧ ರೈತ ಮುಂಬಯಿಗೆ ಬಂದ. ಟ್ರಕ್ಕು ನೇರವಾಗಿ ಶೀಂವ್ ಜನರಲ್ ಆಸ್ಪತ್ರೆಗೆಯೇ ಬಂದು, ಡ್ರೈವರನು ಯಾರು ಯಾರೊಂದಿಗೆಯೋ ಮಾತನಾಡಿ ಅವನನ್ನು ಆಸ್ಪತ್ರೆಗೆ ಸೇರಿಸಿ, ಒಂದೆರಡು ವಾರಗಳಲ್ಲಿ ಹುಷಾರಾದ ನಂತರ ಅವನನ್ನು ಮರಳಿ ಊರಿಗೆ ಕರೆದೊಯ್ಯುವುದಾಗಿ ಹೇಳಿ, ಕೈಯಲ್ಲಿ ಹತ್ತಿಪ್ಪತ್ತು ರೂಪಾಯಿ ಹಾಕಿ ಹೊರಟುಹೋದನು.

ಶೀಂವ್ ಜನರಲ್ ಆಸ್ಪತ್ರೆಯಲ್ಲಿಯೂ ಹತ್ತಾರು ವಿಧದ ಪರೀಕ್ಷೆಗಳನ್ನು ಮಾಡಲು ಸುಮಾರು ಎರಡು ವಾರಗಳೇ ಹಿಡಿದವು. ಅಲ್ಲಿಯ ವೈದ್ಯರಿಗೆ ಇದು ಮನೋರೋಗದ ಪ್ರಕರಣವೆಂದು ಗುರುತಿಸಲು ಶಕ್ಯವಾಗಿ ಅದಕ್ಕೆ ಚಿಕಿತ್ಸೆ ಲಭ್ಯವಿದ್ದುದು ಆ ಕಾಲಕ್ಕೆ ಮುಂಬಯಿಯ ಕೆ. ಈ.ಎಂ. ಆಸ್ಪತ್ರೆಯಲ್ಲಿ ಮಾತ್ರವೆಂದು ಹೇಳಿ ಇವನನ್ನು ಅಲ್ಲಿಗೆ ಹೊತ್ತು ಹಾಕಿದರು. ಈ ಆಸ್ಪತ್ರೆಗೆ ಬಂದ ನಂತರ ಅವನ ಡ್ರೈವರ್ ಮಿತ್ರ ಒಮ್ಮೆ ಬಂದು ನೋಡಿಕೊಂಡು ಹೋಗಿದ್ದನಷ್ಟೆ. ಆದರೆ ಇವನು ಮಾತ್ರ ಇಲ್ಲಿ ಏಕಾಕಿ,



ನೂರಾರು ಜನಗಳ ಮಧ್ಯದಲ್ಲೂ ಪರದೇಶಿ. ಮುಗ್ಧತೆ ಮೊದಲ ನೋಟಕ್ಕೆ ಸಹಾನುಭೂತಿಯನ್ನು ಕೆರಳಿಸುತ್ತಿತ್ತಾದರೂ ಅವನ ಮಾತುಗಳನ್ನು ಸಾವಧಾನವಾಗಿ ಕೇಳಿ ಅರಿತುಕೊಳ್ಳುವಷ್ಟು ಸಮಯ ವ್ಯವಧಾನ ಇತರರಿಗಿರಲಿ, ಸ್ವತಃ ಡಾಕ್ಟರರಿಗೂ ಇರಲಿಲ್ಲವೇನೊ. "ಇದು ಹೋಪ್‌ಲೆಸ್ ಕೇಸ್," ಎಂದು ಡಾಕ್ಟರು ಒಮ್ಮೆ ಉದ್ಗರಿಸಿದ್ದು ನನಗೆ ಸ್ಪಷ್ಟವಾಗಿ ಕೇಳಿಸಿತ್ತು.

ನನ್ನಿಂದ ಅವನಿಗೆ ಸಿಗುತ್ತಿದ್ದುದು ಎರಡು ಮಾತ್ರ: ಒಂದು ನನ್ನ ಕಿವಿ; ಇನ್ನೊಂದು ಆಗೀಗ ಒಂದೆರಡು ಮೋಸಂಬಿ ಹಣ್ಣುಗಳು. ನನ್ನ ತಂದೆ ತಾಯಿಗಳು ನಾಳೆ ಬರುತ್ತಾರೆಂಬ ಸಂಗತಿಯನ್ನು ಅವನಿಗೊಮ್ಮೆ ಹೇಳಿದೆ. "ನಿಮ್ಮ ತಂದೆ ಏನು ಮಾಡುತ್ತಾರೆ?" ಆತ ಕೇಳಿದ.

"ಡಾಕ್ಟರು."

"ಹೌದೆ?" ಅವನ ಸ್ವರದಲ್ಲೇ ಉತ್ತೇಜಿತ ಆಶಾಭಾವನೆಯನ್ನು ಗುರುತಿಸಬಹುದಿತ್ತು.

"ಯಾಕೆ ?"

"ನೀವು ಶ್ರೀಮಂತರು. ಎಲ್ಲರೂ ನಿಮ್ಮ ಕಡೆಗೇ ಬರತಾರೆ, ನಿಮ್ಮನ್ನೇ ಮಾತಾಡಸ್ತಾರೆ, ನಿಮಗೇ ಔಷಧಿ ಕೊಡತಾರೆ; ನಿಮ್ಮಪ್ಪನೂ ಡಾಕ್ಟರು..." ಮುಂದೇನು ಎಂಬಂತೆ ಅವನನ್ನೇ ನಾನು ದಿಟ್ಟಿಸಿದೆ. "ಒಂದು ಕೆಲಸ... ಅಲ್ಲಲ್ಲ ಉಪಕಾರ ಮಾಡತೀರಾ?" ಎಂದು ಆತ ಅಂಗಲಾಚಿದ.

"ಏನು?"

"ನಿಮ್ಮಪ್ಪನೂ ಡಾಕ್ಟರು ಅಂದಿರಿ, ಅವರಿಗಾದರೂ ಹೇಳಿ ತನ್ನ ಜಡ್ಡು ಗುಣ ಮಾಡುತ್ತೀರಾ?"

ಮುಂಬಯಿಯಲ್ಲಿಯ ಈ ತಜ್ಞ ಡಾಕ್ಟರರೆದುರು ನಮ್ಮ ತಂದೆ ತೀರ ಸಾಮಾನ್ಯ ಡಾಕ್ಟರು, ಅವರೊಬ್ಬ ಜನರಲ್ ಪ್ರ್ಯಾಕ್ಟೀಶನರ್ ಎಂದೆಲ್ಲ, ಅವನಿಗೆ ವಿವರಿಸಬೇಕೆಂಬ ವಿಚಾರ ಸುಳಿದುಹೋಯಿತಾದರೂ ಅದು ನಿಷ್ಪ್ರಯೋಜಕವೆಂದು ಅರಿತ ನಾನು ಆಗಲೆಂದು ಒಪ್ಪಿದೆ.

ಮರುದಿನ ನನ್ನ ತಂದೆ ತಾಯಿಗಳು ಬಂದಾಗ ನನಗಿಂತ ಹೆಚ್ಚಿನ ಆನಂದ ಅವನಿಗಾಗಿತ್ತು. ನನ್ನ ತಂದೆಯ ಪಾದಸ್ಪರ್ಶಮಾಡಿ ನಮಸ್ಕರಿಸಬೇಕೆಂಬುದು ಅವನ ಆಸೆಯಾಗಿತ್ತು. ಆದರೆ ಹಾಗೆ ಮಾಡುವುದರಿಂದ ಅವರಿಗೆ ಕೋಪ ಬರುತ್ತದೆಂದು ಅವನಿಗೆ ಮನವರಿಕೆ ಮಾಡಿಕೊಡಬೇಕಾದರೆ ನಾನು ಅಂದು ಅರ್ಧ ದಿವಸವನ್ನೇ ವ್ಯಯಿಸಬೇಕಾಯಿತು. ಅಂತೆಯೇ, ಅವನು ಬರಿ ಕೈಜೋಡಿಸಿ ಕೃತಾರ್ಥನಾದ. ಅವನ ಪ್ರಕರಣವನ್ನು ಕನ್ನಡದಲ್ಲಿ ವಿವರಿಸಿ ಅವನನ್ನು ತಪಾಸು ಮಾಡುವ ನಾಟಕವನ್ನಾದರೂ ಮಾಡಬೇಕೆಂದು ತಂದೆಯವರಿಗೆ ಹೇಳಿದೆ. ಅವನ ನಾಡಿ ಹಿಡಿದು, ಸ್ಟೆತಾಸ್ಕೋಪ್ ಮೂಲಕ ಅವನ ಎದೆ ಬಡಿತ ಆಲಿಸಿ ನಾಲ್ಕಾರು ಪ್ರಶ್ನೆಗಳನ್ನು ಕೇಳಿಯಾದ ನಂತರ ಅವನ ಬಗ್ಗೆ ಈ ಆಸ್ಪತ್ರೆಯ ಡಾಕ್ಟರರಿಗೆ ಸರಿಯಾದ ಸೂಚನೆ ಕೊಡುವುದಾಗಿ ಹೇಳಿದರು. ಆಗ ಅವನ ಮುಖದಲ್ಲಿ ವ್ಯಕ್ತವಾದ ಆನಂದದ ಸಂತೃಪ್ತಿಯ ಚರ್ಯೆಯನ್ನು ನೋಡಿದವರೆ ಮಾತ್ರ ಅನುಭವಿಸಲು ಸಾಧ್ಯ. ಆ ಕ್ಷಣಕ್ಕೆ ಒಂದು ಯೋಚನೆ ಮಿಂಚಿನಂತೆ ನನಗೆ ಹೊಳೆಯಿತು. ನಾನು ವಿದ್ಯಾವಂತನಾದ್ದರಿಂದ ಡಾಕ್ಟರುಗಳೂ ನರ್ಸುಗಳೂ ನನ್ನೊಂದಿಗೆ ಇತರರಿಗಿಂತ ಹೆಚ್ಚು ಮಾತಾಡುತ್ತಿದ್ದರು. ನನ್ನನ್ನು ನೋಡಲು ಬರುವ ಸ್ನೇಹಿತರ ಸಂಖ್ಯೆಯೂ ದೊಡ್ಡದಿತ್ತು. ಅವರೆಲ್ಲ ನನಗೆ ಹಣ್ಣು ಹಂಪಲಗಳನ್ನೂ ಪುಸ್ತಕ ಪತ್ರಿಕೆಗಳನ್ನೂ ತಂದು ಕೊಡುತ್ತಿದ್ದರು. ಆದರೆ ಆ ಮಹಾನಗರದಲ್ಲಿ ಇವನಿಗೆ ಸ್ನೇಹಿತರ ಬಳಗವೂ ಇಲ್ಲ, ಇವನ ಡಾಕ್ಟರುಗಳಿಗೆ ಇವನನ್ನು ಅರ್ಥಮಾಡಿಕೊಳ್ಳುವಷ್ಟು ತಾಳ್ಮೆಯಿಲ್ಲ. ಅಂತೆಯೇ, ಸಾಮಾನ್ಯ ಮಧ್ಯಮ ವರ್ಗದವನಾದ ನಾನು ಅವನ ದೃಷ್ಟಿಯಲ್ಲಿ ಶ್ರೀಮಂತನಾಗಿಬಿಟ್ಟೆ. ತಾನು ಬಡವನೆಂದೂ ತನ್ನನ್ನು ಕೇಳುವವರು ಈ ಆಸ್ಪತ್ರೆಯಲ್ಲೇಕೆ, ಈ ಜಗತ್ತಿನಲ್ಲೇ ಯಾರೂ ಇಲ್ಲವೆಂದೂ ಅವನಿಗನ್ನಿಸಿಬಿಟ್ಟಿತ್ತು. ದಿನವೂ ಹತ್ತಾರು ಬಾರಿ ನನ್ನ 'ಶ್ರೀಮಂತಿಕೆ'ಯನ್ನೂ ತನ್ನ 'ಬಡತನ'ವನ್ನೂ ಅವನು ಆಡಿಕೊಳ್ಳಲೇಬೇಕು.

ಅಂದು ದೊಡ್ಡ ಡಾಕ್ಟರು ರೌಂಡಿಗೆ ಬಂದಾಗ ನನ್ನ ತಂದೆ ತಾಯಿಗಳ ಪರಿಚಯ ಮಾಡಿಕೊಟ್ಟೆ. ನನ್ನ ತಂದೆ ಡಾಕ್ಟರ್ ಎಂದಾಗ ಅವರಿಗೆ ವಿಶೇಷ

ಸಂತೋಷವಾಗಿ ಮನೋರೋಗಗಳ ಬಗ್ಗೆ ಸುಮಾರು ಅರ್ಧ ಗಂಟೆ ಅವರೊಂದಿಗೆ ಚರ್ಚಿಸಿದರು. ಕೊನೆಗೂ ಏನೋ ಧೈರ್ಯ ಬಂದು, "ನಾನೊಂದು ಮಾತು ಆಡಬಹುದೆ?" ಎಂದು ಕೇಳಿದೆ. "ನೀನು ಮಾತಾಡದಿದ್ದರೇ ನಿನಗೇನಾದರೂ ಆಗಿದೆಯೆಂದು ನಾವು ತಿಳಿಯಬೇಕು. ಮಾತಾಡುವುದು ನಿನ್ನ ಆರೋಗ್ಯಕ್ಕೆ ಒಳ್ಳೆಯದು," ಎಂದರು ಡಾಕ್ಟರ್.

"ಇವನ ವಿಷಯ ಗೊತ್ತಿಲ್ಲ?" ಎಂದು ನನ್ನ ಬದಿಯ ಕಾಟಿನ ಸ್ನೇಹಿತನತ್ತ ತೋರಿಸಿ ಹೇಳಿದೆ. "ಅವನ ರೋಗ ಇನ್ನೂ ವಾಸಿಯಾಗದಿರುವುದಕ್ಕೆ ಕಾರಣ, ತಾನು ಬಡವನಾದ್ದರಿಂದ ಎಲ್ಲರೂ, ಡಾಕ್ಟರನ್ನೊಳಗೊಂಡು, ತನ್ನನ್ನು ನಿರ್ಲಕ್ಷಿಸಿದ್ದಾರೆ. ಈ ಆಸ್ಪತ್ರೆಯಲ್ಲಿ, ಈ ಜಗತ್ತಿನಲ್ಲಿ ತನ್ನನ್ನು ಕೇಳುವವರೇ ಇಲ್ಲವೆಂದು ಅವನ ಭಾವನೆಯಾಗಿದೆ."

"ನಿನಗೆ ಹೇಗೆ ಗೊತ್ತು?" ಡಾಕ್ಟರು ಕೇಳಿದರು.

"ಇಲ್ಲಿ ಅವನೊಬ್ಬನೇ ನನ್ನ ಸ್ನೇಹಿತನಾಗಿದ್ದಾನೆ. ಅವನ ಪ್ರತಿ ಮಾತಿನಲ್ಲೂ ಈ ಅಂಶ ವ್ಯಕ್ತವಾಗುತ್ತದೆ."

ಡಾಕ್ಟರು ಮುಗುಳುನಕ್ಕು, "ಸರಿ, ನಿನ್ನ ಮಾತನ್ನು ಪರೀಕ್ಷಿಸಿ ನೋಡೋಣ," ಎಂದು ಹೇಳಿ ಚರ್ಚೆ ಪಳಿದುಕೊಂಡು ಕಿರಿ ಡಾಕ್ಟರುಗಳೊಂದಿಗೆ ಪುಟ್ಟ ಸಭೆಯನ್ನೇ ನಡೆಸಿದರು. ಅವರಿಗೆ ಏನೇನೋ ಸೂಚನೆಗಳು. ಅನಂತರ ಮತ್ತೊಮ್ಮೆ ನನ್ನನ್ನು ಮಾತಾಡಿಸಿದಂತೆ ಮಾಡಿ ಅವನ ಬಳಿ ಹೋಗಿ ಐದು ಹತ್ತು ನಿಮಿಷ ಅವನನ್ನು ಪರೀಕ್ಷಿಸಿದಂತೆ ಮಾಡಿ ಏನೇನೋ ಪ್ರಶ್ನೆ ಕೇಳಿ ಹೋದರು. ಮುಂದಿನ ಅರ್ಧ ಗಂಟೆಯಲ್ಲೇ ಮುಖ್ಯ ನರ್ಸ್ ಬಂದು ಒಳ್ಳೆಯ ಗಂಭೀರಭಾವದಿಂದ ಅವನ ರೋಗ ಡಾಕ್ಟರರಿಗೆ ತಿಳಿದಿದ್ದು ಮಾರು ದಿನ ಬೆಳಿಗ್ಗೆ ಅವನ ತಲೆಗೆ ಶಸ್ತ್ರಕ್ರಿಯೆ ಮಾಡಲು ನಿರ್ಧರಿಸಿದ್ದಾಗಿಯೂ ಹೇಳಿಹೋದಳು. ಅನಂತರ ಪ್ರತಿ ಹದಿನೈದು ನಿಮಿಷಗಳಿಗೊಮ್ಮೆ ಡಾಕ್ಟರೋ ನರ್ಸೋ ಯಾರಾದರೂ ಬಂದು ಅವನ ನಾಡಿಯನ್ನೂ ಎದೆ ಬಡಿತವನ್ನೂ ನೋಡುವರು; ಟೆಂಪರೇಚರ್ ನೋಡಿ ಬರೆದುಕೊಳ್ಳುವರು. ಅಂದು ಸಂಜೆಯವರೆಗೆಂದರೆ ಆ ವಾರ್ಡಿನ ತುಂಬೆಲ್ಲ ಅವನೇ ಬಲು ಮಹತ್ವದ ವ್ಯಕ್ತಿ—ಕೇಂದ್ರಪುರುಷನಾಗಿ ಬಿಟ್ಟ.

ಶಸ್ತ್ರಕ್ರಿಯೆಯೆಂದರೆ ಸಾಮಾನ್ಯವಾಗಿ ಜನ ಕೈಕಾಲು ಕಳೆದುಕೊಳ್ಳುವುದೇ ಹೆಚ್ಚು. ಆದರೆ ಅವನಿಗೆ ಮಾತ್ರ ಅದರ ಪರಿವೆಯಿಲ್ಲ. ನನ್ನ ತಂದೆಯೇ ತನ್ನ ರೋಗವನ್ನು ಗುರುತಿಸಿ ಈ ಡಾಕ್ಟರುಗಳಿಗೆಲ್ಲ ಹೇಳಿರಬೇಕೆಂದೂ ಅದಕ್ಕಾಗಿಯೇ ಎಂದೋ ಆಗಬೇಕಿದ್ದ ಚಿಕಿತ್ಸೆ ಇವರು ಈಗ ಮುಂದಾಗಿದ್ದಾರೆಂದೂ ಅವನು ನನಗೆ ಹೇಳಿದ. ಮಾರುದಿನ ಬೆಳಿಗ್ಗೆ ಏಳು ಗಂಟೆಯ ಸುಮಾರಿಗೆ ಅವನು ಬೇಕಾದಂತೆ ನಡೆದುಕೊಂಡು ಹೋಗಿ



"ಸಿನಿಮಾ ಥೇಟರಿನಲ್ಲಿ ಹಠಾತ್ತನೆ ವಿದ್ಯುತ್ತು ನಿಲುಗಡೆ ಆದಾಗ"

ಬಲ್ಲವನಾಗಿದ್ದರೂ ಅವನನ್ನು ಸ್ಟ್ರೆಚರಿನ ಮೇಲೆ ಮಲಗಿಸಿಯೇ ಆಪರೇಶನ್ ಥೇಟರಿಗೆ ಕರೆದೊಯ್ಯಲಾಯಿತು.

ಮುಂದೆ ಎಂಟು ಗಂಟೆಯ ಹೊತ್ತಿಗೆ ಅಪ್ರಜ್ಞಾವಸ್ಥೆಯಲ್ಲಿದ್ದ ಅವನನ್ನು ತಂದು ಅವನ ಕಾಟಿನ ಮೇಲೆ ಮಲಗಿಸಲಾಯಿತು. ಅವನ ತಲೆಗೊಂದು ದೊಡ್ಡ ಬ್ಯಾಂಡೇಜ್ ಸುತ್ತಲಾಗಿತ್ತು. ಮಧ್ಯಾಹ್ನ ನಾಲ್ಕು ಗಂಟೆಯ ಹೊತ್ತಿಗೆ ಕಣ್ತೆರೆದು ಅವನು ಆಚೀಚೆ ನೋಡತೊಡಗಿದಾಗ ನರ್ಸ್ ಓಡಿ ಬಂದು ಏಳಲು ಯತ್ನ ಮಾಡಕೂಡದೆಂದು ಅವನಿಗೆ ಅಪ್ಪಣೆ ಮಾಡಿ, ಬೇಕೆಂದು ಅವನ ಕೈಗೆ ಚಿವುಟಿದಳು. "ಓಹ್" ಎಂದು ನೋವಿನಿಂದಲೇ ಅವನು ಉದ್ಗರಿಸಿದ. ಆಗ ನೋಡಬೇಕಿತ್ತು ಅವನ ಕಂಗಳನ್ನು – ಅಲ್ಲಿ ಕೃತಜ್ಞತೆಯ ಆನಂದಾಶ್ರುಗಳು.

ಅದೇ ಸಂಜೆ ಆಸ್ಪತ್ರೆಗೆ ಬಂದ ದೊಡ್ಡ ಡಾಕ್ಟರು ನನ್ನನ್ನು ತಮ್ಮ ಕೋಣೆಗೇ ಕರೆಸಿಕೊಂಡು, "Excellent diagnosis, perfect diagnosis. ಈಗ ನಿನಗೊಂದು ಮಾತು ಹೇಳಲಾ?" ಎಂದು ಕೇಳಿದರಾದರೂ ನನ್ನ ಪ್ರತಿಕ್ರಿಯೆಗಾಗಿ ಕಾಯದೇ ಮುಂದುವರಿಸಿದರು. "ಇದು ನೋಡು, ಕಳೆದ ಒಂದು ವಾರ ನೀನು ಅವನ ಸ್ನೇಹದಲ್ಲಿ ನಿನ್ನ ಅಸ್ವಾಸ್ಥ್ಯವೇನೆಂಬುದನ್ನು ಮರೆತಿರುವೆ. ಅಲ್ಲವೆ? ಅಂದರೆ ನಿನ್ನ ಮನಸ್ಸನ್ನು ಮತ್ತೆಲ್ಲಾದರೂ ತೊಡಗಿಸಲು ನಿನಗೆ ಸಾಧ್ಯವಾದರೆ ನೀನು ತುಂಬ normal ಮನುಷ್ಯ: ನಿನಗೇನೂ ಆಗಿಲ್ಲವೆಂಬುದು ನಿನಗೇ ಮನದಟ್ಟಾಗುತ್ತದೆ. ನಿನಗೆ ನೌಕರಿಯಿಲ್ಲದಿದ್ದರೆ ಡಾಕ್ಟರರಾಗಿರುವ ನಿಮ್ಮ ತಂದೆಯವರ ದವಾಖಾನೆಯಲ್ಲಿ ಕಂಪೌಂಡರ್ ಕೆಲಸ ಮಾಡು. ಮನುಷ್ಯನಿಗೆ ತನ್ನನ್ನೇ ತೊಡಗಿಸಿಕೊಳ್ಳಲು ಕೆಲಸ ಬೇಕು ನೋಡು. ನಿನ್ನ ಶರೀರಕ್ಕೆ, ಮನಸ್ಸಿಗೆ ವ್ಯಾಯಾಮವಾಗಬೇಕಾದರೆ ಜಗತ್ತಿನಲ್ಲಿ, ಜೀವನದಲ್ಲಿ ಆಸಕ್ತಿಯನ್ನು ಬೆಳೆಸಿಕೋ."

ಆಗ ನನಗದೇನೋ ಹೊಸ ಜಗತ್ತನ್ನೇ ಕಂಡ ಅನುಭವ. ನಾನು ಈ ಜಗತ್ತನ್ನು ಎದುರಿಸಿ ಮುನ್ನಡೆಯಬಲ್ಲೆನೆಂಬ ವಿಶ್ವಾಸದ ಛಾಯೆ ನನ್ನಲ್ಲಿ ಮೂಡಿರಬೇಕು. ✡

(ಶ್ರೀ ಶಿವಾನಂದ ಜೋಶಿಯವರು ಸಂಪಾದಿಸಿ ಹುಬ್ಬಳ್ಳಿಯ ಅಭಿರುಚಿ ಪ್ರಕಾಶನದವರು ಪ್ರಕಟಿಸಲಿರುವ 'ಕಳಚಿದ ಕೊಂಡಿಗೆ ರಕ್ತದ ಬೆಸುಗೆ' ಪುಸ್ತಕದಲ್ಲಿ 'ನಾನು ಮತ್ತೆ ನಾರ್ಮಲ್ ಆದೆ' ಎಂಬ ತಲೆಕಟ್ಟಿನೊಂದಿಗೆ ಈ ಅನುಭವ ಚಿತ್ರಣ ಪ್ರಕಟವಾಗಲಿದೆ.)



ನೆಲ್ಲಿ ಬ್ಲಾಯ್ ಪ್ರಾಯಶಃ ಜಗತ್ತಿನ ಪ್ರಪ್ರಥಮ ಮಹಿಳಾ ವರದಿಗಾರ. ಅವಳನ್ನು ಆಯ್ದು ನೇಮಿಸಿಕೊಂಡವನು ಪುಲಿಟ್ಜರ್. ವರದಿಗಾರ ಯಾವುದನ್ನೂ ಬರಿ ಕೇಳಿಕೆಯ ಮಾತಿನಿಂದ ಬರೆಯಬಾರದು ಎಂಬ ನೀತಿಯಲ್ಲಿ ಆಕೆಗೆ ಪೂರ್ಣ ವಿಶ್ವಾಸ. ಅಮೇರಿಕದಲ್ಲಿಯ ಮಾನಸಿಕ ರೋಗಿಗಳ ಆಸ್ಪತ್ರೆಗಳಲ್ಲಿಯ ಸ್ಥಿತಿಗತಿಗಳು ಸರಿಯಾಗಿಲ್ಲವೆಂದು ಜನ ಆಡಿಕೊಳ್ಳುತ್ತಿದ್ದರಾದರೂ ಅಲ್ಲಿ ನಡೆಯುತ್ತಿದ್ದುದೇನೆಂದು ಎಲ್ಲರೂ ಊಹೆಯಿಂದ ಮಾತ್ರವೇ ಕಲ್ಪಿಸಬಹುದಿತ್ತು. ಆಗ ನೆಲ್ಲಿ ಮಾನಸಿಕ ಅಸ್ವಾಸ್ಥ್ಯವನ್ನು ನಟಿಸಿ ಒಂದು ಮನೋರೋಗಗಳ ಆಸ್ಪತ್ರೆಯಲ್ಲಿ ಪ್ರವೇಶ ಪಡೆದಳು. ಅಲ್ಲಿ ಕೆಲ ತಿಂಗಳುಗಳನ್ನು ಕಳೆದ ನಂತರ ಹೊರ ಬಂತು ಹುಚ್ಚಾಸ್ಪತ್ರೆಯ ಪ್ರತ್ಯಕ್ಷದರ್ಶಿಯ ವರದಿ. ಆಗ ಅದು ದೇಶವನ್ನೇ ನಡುಗಿಸಿತು.

# ಹಿಮಕರಡಿ

ಟಿ. ಎಂ. ಸುಬ್ಬರಾಯ

ಹಿಮಕರಡಿಗಳ ಲೋಕ ವಿಶಾಲವಾದದ್ದು. ಭೂಮಿ. ಸಾಗರ, ಹಿಮಾಚ್ಛಾದಿತ ನೆಲಗಳೆಲ್ಲಾ ಸೇರಿದಂತೆ ಉತ್ತರ ಭಾಗದ ಸುಮಾರು ಐವತ್ತು ಲಕ್ಷ ಚದುರ ಮೈಲಿ ವಿಸ್ತೀರ್ಣದ ಪ್ರದೇಶದಲ್ಲಿ ಅವು ವಾಸಿಸುತ್ತವೆ. ಆರ್ಕ್‌ಟಿಕ್ ವೃತ್ತ ವಲಯದಲ್ಲಿ ಹಾಗೂ ಕೆನಡಾ, ಗ್ರೀನ್‌ಲ್ಯಾಂಡ್, ನಾರ್ವೆ ಮತ್ತು ರಶಿಯದ ಉತ್ತರ ಭಾಗಗಳಲ್ಲಿ ಹಿಮಕರಡಿಗಳು ಕಾಣಸಿಗುತ್ತವೆ.

ಒಂದು ನಿರ್ದಿಷ್ಟವಾದ ತಾಣದಲ್ಲಿ ನೆಲೆ ನಿಲ್ಲುವ ಸ್ವಭಾವ ಹಿಮಕರಡಿಗಳದಲ್ಲ. ಅವು ಸದಾ ಒಂದು ಹಿಮದಿಣ್ಣೆಯಿಂದ ಇನ್ನೊಂದಕ್ಕೆ ಸಂಚರಿಸುತ್ತಿರುತ್ತವೆ. ಹಾಗೆ ಅಲೆಯುವಾಗ ಹಿಮಗಾಳಿ ಇದಿರಾದಂತೆ ಮಾರ್ಗ ಅರಸಿಕೊಂಡು ಸಾಗುವ ಚಾಣಾಕ್ಷ ಬುದ್ಧಿಯೂ ಅವಕ್ಕಿದೆ.

ತುಪ್ಪಳದ ಬಲವಾದ ಕೋಟಿನಂಥ ಮೇಲು ಹೊದಿಕೆ ದಪ್ಪನೆಯ ದಟ್ಟ ಚರ್ಮ ಇವು ಉತ್ತರ ಧ್ರುವ ಪ್ರದೇಶದ ಅತಿ ಶೀತವನ್ನು ತಡೆದು ಕೊಳ್ಳಲು ಹಿಮಕರಡಿಗಳಿಗಿರುವ ಸಾಧನಗಳು. ಬಿಡಿ ಬೆರಳುಗಳ ಜಾಲದ ಪಾದಗಳು ಹಿಮದಲ್ಲಿ ಹಿಮಕರಡಿಗಳು ವೇಗವಾಗಿ ಸಾಗಲು ಸಹಾಯಕವಾಗಿವೆ. ಇವುಗಳ ಪಾದರಚನೆ ವಿಚಿತ್ರವಾಗಿದೆ— ತೀರಾ ದೊಡ್ಡದು ಕೂಡಾ; ಹಿಮದ ಮೇಲೆ ಸುಮಾರು ಹನ್ನೆರಡು ಇಂಚು ಹೆಜ್ಜೆಗುರುತು ಉಂಟಾಗುತ್ತವೆ. ನಡೆಯುವಾಗ ಅಲ್ಲಲ್ಲಿ ಕ್ಷಣ ಕಾಲ ನಿಂತು, ಅಲ್ಲಿ ಅಗೆದು ಮೂಸಿ ನೋಡಿ ಪುನಃ ಸಾಗುವುದರಲ್ಲಿ ಉಳಿದ ಕರಡಿಗಳ ಸ್ವಭಾವವನ್ನೇ ಇವೂ ಅನುಸರಿಸುತ್ತವೆ. ಅಗೆದಾಗ ಅಲ್ಲಿ ಸಿಗುವ ಪ್ರಾಣಿ-ಕೀಟಗಳನ್ನು ಭುಂಜಿಸುತ್ತವೆ. ಮೂಳಸನ್ನೆತ್ತಿ ಬದಿಗೆ ಬಿಸಾಡುತ್ತವೆ. ಈ ದೃಷ್ಟಿಯಿಂದ ಹಿಮಕರಡಿ ಬೇಟೆಗಾರನೂ ಹೌದು, ಭಂಗಿಯೂ ಹೌದು.

ಹಿಮದಲ್ಲಿ ತೋಡಲ್ಪಟ್ಟ ಗವಿಗಳಲ್ಲಿ ಅಡಗಿಕೊಳ್ಳುವುದರ ಮೂಲಕ ವಿಷಮ ಹವಾಮಾನದಿಂದ ಹಿಮಕರಡಿಗಳು ರಕ್ಷಣೆ ಪಡೆಯುತ್ತವೆ. ಗಂಡು ಕರಡಿಗಳು ಈ ಬಗೆಯ ಗವಿಗಳಲ್ಲಿ ಹೆಚ್ಚು ಕಾಲ ತಂಗುವುದಿಲ್ಲ. ವಿಶ್ರಾಂತಿಗಿಂತ ಸಂಚಾರವೇ ಅವುಗಳಿಗೆ ಹೆಚ್ಚು ಇಷ್ಟ. ಆದರೆ, ಹೆಣ್ಣು ಕರಡಿಗಳು ಮಾತ್ರ ಹೆಚ್ಚು ಕಾಲ ಇಲ್ಲಿ ತಂಗುತ್ತವೆ. ಕೆಲವು ಬಾರಿ ಆರೆಂಟು ತಿಂಗಳುಗಳ ಕಾಲ ಇವು ಇಲ್ಲಿಂದ ಕದಲದಿರುವುದೂ ಉಂಟು! ಈ ಗವಿಗಳಲ್ಲಿಯ ಗಾಳಿ ಹೊರ ಪ್ರದೇಶದ ಗಾಳಿಗಿಂತ ಸಾಮಾನ್ಯವಾಗಿ ನಲವತ್ತು ಡಿಗ್ರಿಗಳಷ್ಟು ಹೆಚ್ಚು ಉಷ್ಣವಾಗಿರುತ್ತದೆ.

ಗರ್ಭ ಧರಿಸಿರುವ ಹೆಣ್ಣು ಕರಡಿಗಳ ಪ್ರಸವ ಕಾಲ ನವೆಂಬರ್ ತಿಂಗಳ ಕೊನೆ ಅಥವಾ ಡಿಸೆಂಬರಿನ ಆರಂಭ ದಿನಗಳು. ಪ್ರಥಮ ಬಾರಿಯಾಗಿ ಹೆಣ್ಣು ಕರಡಿ ಗರ್ಭ ಧರಿಸಿದ್ದರೆ ಅದು ಈಯುವುದು ಒಂದು ಮರಿಯನ್ನು. ನಂತರದ ಪ್ರಸವದಲ್ಲಿ ಪ್ರತಿ ಬಾರಿಯೂ ಎರಡು ಮರಿಗಳು! ಹೊಸ ಮರಿಗಳು ಸಾಮಾನ್ಯವಾಗಿ ಒಂದು ಅಥವಾ ಎರಡು ಪೌಂಡುಗಳಷ್ಟು ಮಾತ್ರ ತೂಗುತ್ತವೆ. ಅವುಗಳನ್ನು ತಾಯಿ ಶೀತಭೂಮಿಯಲ್ಲಿ ಮಲಗಿಸದೆ ತನ್ನ ಬೆಚ್ಚನೆಯ ತುಪ್ಪಳದ ಕೋಟಿನಲ್ಲಿಟ್ಟುಕೊಂಡು ರಕ್ಷಿಸುತ್ತದೆ.

ಮರಿಗಳು—ಗವಿಯಿಂದ ಹೊರಗೆ ಹೋಗಲು ತಾಯಿ ಕರಡಿ ಮುಂದಿನ ಮಾರ್ಚ್ ಅಥವಾ ಏಪ್ರಿಲ್ ತಿಂಗಳಲ್ಲಿ ಮಾರ್ಗ ರಚಿಸಿಕೊಳ್ಳುತ್ತದೆ. ಆ ಮಾರ್ಗದ ಮೂಲಕ 'ಮರಿಗಳು ಬಂದು



ಗವಿಯಲ್ಲಿ ಮರಿಯೊಂದಿಗೆ ಮಜಾ ಮಾಡುತ್ತಿರುವ ತಾಯಿ

ಹೊರಗೆ ಇಣುಕಿ ನೋಡುತ್ತವೆ. ಮುಂದಿನ ಎರಡು ವರುಷಗಳ ಕಾಲ ಅವು ತಮ್ಮ ತಾಯಿಯ ಜೊತೆಯಲ್ಲಿಯೇ ಸಂಚರಿಸುತ್ತವೆ. ಈ ಅವಧಿಯಲ್ಲಿ ತಾಯಿ ತನ್ನ ಮರಿಗಳಿಗೆ ಆಹಾರ ದೊರಕಿಸುವ, ಕದಿಯುವ, ಪಡೆಯುವ ಮೊದಲಾದವುಗಳ ಬಗೆಗೆ ಸರಿಯಾದ ತರಬೇತಿ ನೀಡುತ್ತದೆ. ಹಿಮಕರಡಿಯ ಮರಿಗೆ ಒಂದು ಬಾರಿಗೆ ಹದಿನೈದು ಪೌಂಡ್ ತೂಗುವ ಸೀಲ್ ಮರಿಯ ಆಹಾರ ಸಾಕಾಗುವುದಿಲ್ಲ. ಸಮವಯಸ್ಸಿನ ಹಿಮಕರಡಿಯೊಂದರ ಊಟಕ್ಕೆ ಒಂದು ಬಾರಿಗೆ ಬೇಕಾಗುವ ಆಹಾರ ಕನಿಷ್ಟ ನೂರಾ ಐವತ್ತು ಪೌಂಡು ಸೀಲ್ ಪ್ರಾಣಿಯ ಮಾಂಸ !

ಹಿಮಕರಡಿಗಳು ಮಾಂಸಾಹಾರಿಗಳೂ ಹೌದು ಸಸ್ಯಾಹಾರಿಗಳೂ ಹೌದು. ವಸಂತ ಕಾಲದಲ್ಲಿ ಅವುಗಳ ಆಹಾರ ಹಿಮಪ್ರದೇಶದ ಸೀಲ್ ಪ್ರಾಣಿಗಳು. ಅವು ಅಲಭ್ಯವಾಗುವ ಚಳಿಗಾಲದಲ್ಲಿ ಹಿಮಕರಡಿಗಳು ಹುಲ್ಲು ತಿಂದು ಬದುಕುತ್ತವೆ! ಚೆರ್ರಿ ಹಣ್ಣುಗಳು, ಸಪ್ಪೆ ಎಲೆ, ಸಾರಲ್ ಮುಂತಾದ ಉತ್ತರ ಧ್ರುವಪ್ರದೇಶದ ಸಸ್ಯವರ್ಗಗಳೂ ಹಿಮಕರಡಿಯ ಆಹಾರ ವಸ್ತುಗಳೇ! ಕೆಲವು ಬಗೆಯ ಪಕ್ಷಿಗಳನ್ನೂ ಅವುಗಳ ಮೊಟ್ಟೆಯನ್ನೂ ಇವು ತಿನ್ನುವುದುಂಟು!





ಹಿಮಕರಡಿಯ ಮುಖ್ಯ ಆಹಾರ ಸೀಲ್ ಪ್ರಾಣಿಗಳು. ಬೇಸಿಗೆ ಕಾಲದಲ್ಲಿ ಹಿಮಕರಡಿಗಳಿಗೆ ಹಸಿವೂ ಹೆಚ್ಚು. ಆಗ ಈ ಸೀಲ್ ಪ್ರಾಣಿಗಳು ಹೆಚ್ಚಾಗಿ ಉತ್ತರ ವಲಯ ವೃತ್ತ ಪ್ರದೇಶದಲ್ಲಿ ಕಾಣಸಿಗುತ್ತವೆ. ಇವುಗಳನ್ನು ಬೇಟೆಯಾಡಿ ಹಿಮಕರಡಿಗಳು ಹಿಡಿಯುವುದೇ ಒಂದು ಸೊಗಸು. ಸೀಲ್‌ಗಳಿಗೆ ನಿದ್ದೆ ಹೆಚ್ಚು. ಕೆಲವು ಬಾರಿ ಹಗಲು ರಾತ್ರಿಗಳ ಪರಿವೆ ಇಲ್ಲದೆ ಅವು ನಿದ್ದೆ ಹೋಗುತ್ತವೆ. ಆಗೀಗ ಎಚ್ಚರವಾದಾಗ ಆಕಳಿಸಿ ಆಚೀಚೆ ನೋಡಿ ಪುನಃ ನಿದ್ದೆ ಹೋಗುತ್ತವೆ. ಅಂಥ ಸಂದರ್ಭಗಳಲ್ಲಿ ತನ್ನ ಸಮೀಪ, ತೀರಾ ಹತ್ತು ಇಂಚುಗಳಷ್ಟು ಹತ್ತಿರ ಶತ್ರು ಬಂದರೂ ಅದಕ್ಕೆ ಗೊತ್ತಾಗುವುದಿಲ್ಲ. ಇಂಥ ಸಂದರ್ಭ ಕಾಯ್ದು ಥಟ್ಟನೆ ಅವುಗಳ ಮೇಲೆ ಆಕ್ರಮಣ ಮಾಡಿ, ತನ್ನ ಪಂಜು ಹಾಗೂ ಉಗುರುಗಳಿಂದ ಹಿಡಿಯುತ್ತದೆ ಹಿಮಕರಡಿ. ಸೀಲ್ ಮಾಂಸವೆಂದರೆ ಹಿಮಕರಡಿಗೆ ಬಲು ಇಷ್ಟ. ಆದರೆ ಇಡೀ ಸೀಲನ್ನು ಹಿಮಕರಡಿ ಭುಂಜಿಸುವುದಿಲ್ಲ. ಒಂದಿಷ್ಟು ಕೊಬ್ಬು, ಮಾಂಸ, ಕರುಳ ಭಾಗವನ್ನು ತಿಂದು ಉಳಿದುದನ್ನು ಹಾಗೆಯೇ ಚೆಲ್ಲಿಬಿಡುತ್ತದೆ. ಅವು ಧ್ರುವ ಪ್ರದೇಶದ ನರಿಗಳಿಗೆ ಆಹಾರವಾಗುತ್ತವೆ! ಅವು ಕೂಡಾ ಕರಡಿಗಳು ಉಂಡು ಹೋಗುವುದನ್ನೇ ಕಾಯುತ್ತಿರುತ್ತವೆ.

ಆಹಾರ ಭುಂಜಿಸಿ [illegible] ಹಿಮಕರಡಿ ವಿಶ್ರಾಂತಿಗಾಗಿ ಈ [illegible] ಹಿಮಗಡ್ಡೆಯೊಳಗೆ ಸಾಗುತ್ತವೆ! ಅಲ್ಲಿ ಅವು ದೀರ್ಘ ವಿಶ್ರಾಂತಿ ಪಡೆಯುತ್ತವೆ. [illegible]

ಇನ್ನೊಂದು ಹಿಮಗಡ್ಡೆಗೆ ವಲಸೆ ಹೋಗಲಾರಂಭಿಸುತ್ತದೆ. ಯಾವ ಹಿಮಗಡ್ಡೆಯೂ ಸುರಕ್ಷಿತವಲ್ಲ ಎನ್ನಿಸಿದಾಗ ಹತ್ತಿರವಿರುವ ಸಾಗರ ತೀರ ಪ್ರದೇಶದತ್ತ ಧಾವಿಸಿ, ಅಲ್ಲಿ ಬದುಕುವ ಯತ್ನ ಮಾಡುತ್ತವೆ.

ಇವು ಒಳ್ಳೆಯ ಈಜುಗಾರ ಪ್ರಾಣಿಗಳು. ಸಮುದ್ರವಲ್ಲಿ ಕೂಡಾ ಇವು ತುಂಬಾ ದೂರದ ವರೆಗೆ ಈಜಬಲ್ಲವು.

ಹಿಮಕರಡಿಗಳದು ದೊಡ್ಡ ಪ್ರಮಾಣದ ದೇಹ. ಕೆಲವು ಗಂಡು ಕರಡಿಗಳಂತೂ ಏಳು ನೂರರಿಂದ ಸಾವಿರ ಪೌಂಡಿನಷ್ಟು ತೂಗುತ್ತವೆ. ಆದರೆ ಅವು ಜಗಳಗಂಟ ಪ್ರಾಣಿಗಳಲ್ಲ: ಅವು ಹೆಚ್ಚು ಮಟ್ಟಿಗೆ ಎಲ್ಲದರ ಕುರಿತೂ ಆಸಕ್ತಿ ತೋರುತ್ತವೆ, ಅವಕ್ಕೆ ಕುತೂಹಲ ಹೆಚ್ಚು. ನೀರೊಳಗಿನ ವಾಲ್‌ರಸ್ ಹಾಗೂ ತಿಮಿಂಗಿಲಗಳ ಹೊರತು ಹಿಮಕರಡಿಗಳಿಗೆ ಇನ್ನಾವ ಶತ್ರುಗಳೂ ಇಲ್ಲ, ನೆಲದ ಮೇಲಂತೂ ಇವಕ್ಕೆ ಶತ್ರುಗಳೇ ಇಲ್ಲ – ಮಾನವನನ್ನು ಬಿಟ್ಟು.

ಯುರೋಪ್ಯ ಹಾಗು ಅಮೇರಿಕನ್ನರಿಂದ ಉತ್ತರ ಧ್ರುವ ಪ್ರದೇಶದ ಅನ್ವೇಷಣೆ ಆರಂಭವಾದಾಗ ಹಿಮಕರಡಿಗಳ ಪಾಲಿಗೆ ತೊಂದರೆ ಪ್ರಾರಂಭವಾಯಿತು. ಅನ್ವೇಷಕರು ಇವುಗಳನ್ನು ನಾಶಪಡಿಸತೊಡಗಿದರು. ಅವುಗಳನ್ನು ಹಿಡಿದು ನಗರಕ್ಕೆ ತಂದು ಮಾರುವುದೂ ಆರಂಭವಾಯಿತು. ಇತ್ತೀಚಿನ ದಶಕಗಳಲ್ಲಿ ವರ್ಷವೊಂದಕ್ಕೆ ಸರಾಸರಿ ಒಂದು ಸಾವಿರ ಹಿಮಕರಡಿಗಳನ್ನು ಬೇಟೆಯಾಡಿ ಕೊಲ್ಲಲಾಗುತ್ತಿದೆ ಎಂಬುದಾಗಿ ವರದಿಯಾಗಿದೆ. ಈಗ ಇರುವ ಒಟ್ಟು ಹಿಮಕರಡಿಗಳ ಸಂಖ್ಯೆ ಕೇವಲ ಇಪ್ಪತ್ತುಸಾವಿರ. ಹೀಗೆಯೇ ಹಂತಕರು ತಮ್ಮ ಕಾರ್ಯ ನಡೆಸುತ್ತಾ ಹೋದರೆ, ಇನ್ನು ಕೇವಲ ಎರಡೇ ದಶಕಗಳಲ್ಲಿ ಹಿಮಕರಡಿಗಳು ಈ ಭೂಮಿಯಲ್ಲಿ ಇಲ್ಲವಾಗುತ್ತವೆ! ಸದ್ಯ ಇವುಗಳ ರಕ್ಷಣೆಗೆ ಕೆಲವು ಕಾರ್ಯಕ್ರಮಗಳನ್ನು ನಿಯೋಜಿಸಿಕೊಳ್ಳಲಾಗಿದೆ. ಸೋವಿಯತ್ ಯೂನಿಯನ್ನಿನಲ್ಲಿ ೧೯೫೫ರಿಂದ ಹಿಮಕರಡಿಗಳ ಬೇಟೆಯನ್ನು ನಿಷೇಧಿಸಲಾಗಿದೆ. ಆ ಮೂಲಕ ಅವುಗಳಿಗೆ ಪೂರ್ಣ ಪ್ರಮಾಣದ ರಕ್ಷಣೆ ಒದಗಿಸಲಾಗಿದೆ. ಮೃಗಾಲಯದಲ್ಲಿಡಲು ಕೆಲವೇ ಮರಿಗಳನ್ನು ಸರಕಾರ ಆಗೀಗ ಹಿಡಿಯುತ್ತದೆ ಅಷ್ಟೇ! ಸುಮಾರು ಎರಡು ಸಾವಿರ ವರುಷಗಳ ಹಿಂದೆಯೇ ಐರೋಪ್ಯರು ಹಿಮಕರಡಿಗಳ ಅಸ್ತಿತ್ವದ ಬಗ್ಗೆ ತಿಳಿದಿದ್ದರು. ಆದರೆ, ಈಗಲೂ ಅವುಗಳ ಸ್ವಭಾವ, ಸಂಚಾರ, ವಲಸೆಹೋಗುವ ಕಾರಣ ಎಲ್ಲವೂ ನಿಗೂಢವಾಗಿವೆ. ★



ಜಗತ್ತಿನ ಎಲ್ಲ ಸಮುದ್ರಗಳ ನೀರಿನಲ್ಲಿರುವ ಇಡೀ ಉಪ್ಪನ್ನು ತೆಗೆದು ಹೊರ ಹಾಕುವುದು ಸಾಧ್ಯವೇ? ಹಾಗಾಗುವದಾದರೆ ಆ ಉಪ್ಪಿನ ಒಟ್ಟು ಎಷ್ಟಾಗಬಹುದು?

ಸಾಗರಗಳಲ್ಲಿ ಅಡಗಿರುವ ಒಟ್ಟು ಉಪ್ಪಿನ ಪ್ರಮಾಣ ಊಹೆಗೂ ನಿಲುಕದಷ್ಟು ದೊಡ್ಡದು. ಒಂದು ಲೆಕ್ಕಾಚಾರದಂತೆ ಸಾಗರಗಳಲ್ಲಿನ ಇಡೀ ಉಪ್ಪಿನ ಪ್ರಮಾಣ ಐದುನೂರು (೫೦೦೦೦೦೦೦೦೦೦೦೦೦೦೦೦, ಕೋಟಿ ಕೋಟಿ ಟನ್ನುಗಳು.

ಈ ಉಪ್ಪನ್ನು ಪ್ರಪಂಚದ ಎಲ್ಲೆಡೆಯೂ ಸಮನಾಗಿ ಹರಡಿದರೆ ಎಲ್ಲಾ ಊರುಗಳ ಮೇಲೂ ಸುಮಾರು ೫೦೦ ಅಡಿಗಳಷ್ಟು ಎತ್ತರ (೫೦ ಮಹಡಿಗಳಷ್ಟು ಎತ್ತರ!) ಉಪ್ಪಿನ ರಾಶಿ ನಿಂತಿರುತ್ತದೆ.

—'ವಿಜ್ಞಾನ ಸೌರಭ'ದಿಂದ

ಮೆನನ್ನರನ್ನು
ನೆಹರೂ ಕೈಬಿಟ್ಟರೇಕೆ ?

# 'ತಕ್ಷಕಾಯ ಸ್ವಾಹಾ ಇಂದ್ರಾಯ ಸ್ವಾಹಾ..'

**ಎಂ. ಡಿ. ರಾಣೆ**

ಮೈ ಆವಾರಾ ಹೂಂ. ಆಸಮಾನಕಾ ತಾರಾ ಹೂಂ' ಎಂದು ಚೀನದ ಪ್ರಧಾನಿ ಚೌಎನ್ ಲಾಯ್‌ರು ಹಾಡುತ್ತಿದ್ದಾಗ ನಾವು ಭಾರತೀಯರು ಮೆಚ್ಚಿದ್ದು ಕುಣಿಯುತ್ತಿದ್ದೆವು. ರಾಜ ಕಪೂರನ ಚಿತ್ರಗಳಾದ ಆವಾರಾ, ಶ್ರೀ ೪೨೦, ಬೂಟ್ ಪಾಲಿಶ್, ರಶಿಯಾ ಚೀನ ಮುಂತಾದ ಸಾಮ್ಯವಾದೀ ದೇಶಗಳನ್ನು ಭಾರತದ ಸಮೀಪಕ್ಕೆ ತಂದಿದ್ದವು. 'ಹಿಂದಿ ಚೀನಿ ಭಾಯಿ ಭಾಯಿ' ಎಂದು ಪ್ರತಿಯೊಬ್ಬ ಭಾರತೀಯನೂ ಹೆಮ್ಮೆಯಿಂದ ಘೋಷಿಸುತ್ತಿದ್ದ. ೧೯೪೯ರಲ್ಲಿ ಚೀನಾದಲ್ಲಿ ಕ್ರಾಂತಿಯಾಗಿ ಚಿಯಾಂಗ್ ಕೈಶೇಕ್ ತೈವಾನಕ್ಕೆ ಓಡಿಹೋಗಿ ಮಾವೋನ ಸರ್ವಾಧಿಕಾರತ್ವದಲ್ಲಿ ಸಾಮ್ಯವಾದಿ ಪಕ್ಷ ಅಧಿಕಾರಕ್ಕೆ ಬಂದಕೂಡಲೇ ನಮ್ಮನ್ನು ನಾವೇ ಮರೆತೆವು. ಚೀನ ನಮ್ಮ ಮಿತ್ರ, ದೊಡ್ಡಣ್ಣ; ಎರಡೂ ದೇಶಗಳಲ್ಲಿಯ ಐತಿಹಾಸಿಕ ಸಂಬಂಧ ಅತ್ಯಂತ ಹಳೆಯದು ಎಂದೆಲ್ಲ ಹೇಳಿದೆವು, ಕೂಗಿದೆವು.

ಅಕ್ಟೋಬರ್ ೨೧ ೧೯೬೨, ಭಾರತೀಯನು ಎಂದೂ ಮರೆಯದ ದಿನ. ನಮ್ಮ ಪ್ರತಿಷ್ಠೆ ಮಣ್ಣು ಮುಕ್ಕಿತು; ಹದಂಕೆಯ ಕಾರ್ಮೋಡ ಕವಿಯಿತು. ಸೇನಾದಳದ ಮನಃಸ್ಥೈರ್ಯ ಕತ್ತರಿಸಿತು. ಸೋಲರಿಯದ ಭಾರತೀಯ ಜವಾನ ಸೋತ. ಚೀನದ ಭಯಾನಕ ಆಕ್ರಮಣಕ್ಕೆ ಭಾರತ ಗುರಿಯಾಯಿತು. ನಿದ್ರಿಸುತ್ತಿರುವ ಮಹಾ ರಾಕ್ಷಸ ಎಚ್ಚರಾಗಿ ಘೂತ್ಕರಿಸಿದ. ಸದಾ ಉಲ್ಲಸಿತರಾಗಿ ಆರೋಗ್ಯವಂತರಾಗಿರುತ್ತಿದ್ದ ಪಂಡಿತಜಿಯ ದೇಹಸ್ಥಿತಿ ಹದಗೆಟ್ಟಿತು. ಈ ಆಘಾತದಿಂದ ಅವರ ಚೇತರಿಸಿಕೊಳ್ಳಲಿಲ್ಲ. ಅವರ ಜನಪ್ರಿಯತೆಗೆ ಗ್ರಹಣ ಹಿಡಿಯಿತು.

ವಿರೋಧಿಗಳಂತೂ ಒಂದೇ ಸಮನೆ ಪಂ. ನೆಹರೂ, ವಿ. ಕೆ. ಕೃಷ್ಣ ಮೆನನ್ ಮತ್ತು ನೇಫಾ ಪ್ರದೇಶದ ಸೈನಿಕ ಕಮಾಂಡಿಗ್ ಅಧಿಕಾರಿ ಜನರಲ್ ಕೌಲರನ್ನು ಟೀಕಿಸುತ್ತಿದ್ದರು.

೧೯೪೯ ರಲ್ಲಿ ಚೀನ ಕಮ್ಯುನಿಸ್ಟ ಪಕ್ಷದ



ನಿಯಂತ್ರಣದಲ್ಲಿ ಬಂದಾಗಲೇ ಪಂ. ನೆಹರೂ ಆ ದೇಶದ ಕೂಡ ಮೈತ್ರಿಯನ್ನು ಬೆಳೆಸಲು ಇಚ್ಛಿಸುತ್ತಿದ್ದರು. ಚೀನ ದೊಡ್ಡ ದೇಶ. ಪ್ರಪಂಚದ ಅಗ್ರೇಸರ ರಾಷ್ಟ್ರಗಳಲ್ಲಿ ಅದೊಂದಾಗುವದು ಖಂಡಿತ. ಗಡಿ ಪ್ರಶ್ನೆಗಳನ್ನು ಕುರಿತು ಚೀನ ಮತ್ತು ರಶಿಯಾಗಳಲ್ಲಿ ಮತಭೇದ ತಲೆದೋರುವದು ಖಚಿತವೆಂದು ನೆಹರೂರವರಿಗೆ ಮೊದಲೇ ಗೊತ್ತಿತ್ತು. ಅದ್ದರಿಂದ ನೆರೆಹೊರೆಯ ದೇಶವಾದ ಚೀನದ ಕೂಡ ಸ್ನೇಹ ಧೋರಣೆಯನ್ನು ತಾಳಿದಲ್ಲಿ ಏನೂ ತಪ್ಪು ಇಲ್ಲವೆನ್ನುವುದು ಅವರ ವಾದ. ಅವರು ಎಂದಿಗೂ [illegible] ಗತನ ಧೋರಣೆಯನ್ನು ತಿಳಿಯಲಿಲ್ಲ. ಚೀನ ಮ್ಯಾಕ್‌ಮಹೋನ್ ರೇಖೆಯನ್ನು ಒಪ್ಪಬೇಕೆಂದು ಆಗ್ರಹಪಡಿಸುತ್ತಿದ್ದರು. ಚೀನ ನೇಫಾದಲ್ಲಿ ಮ್ಯಾಕ್‌ಮಹೋನ್ ರೇಖೆಯನ್ನು ಒಪ್ಪುತ್ತಿದ್ದರೂ

ಆಕ್ಸೈ ಚಿನ್ ಪ್ರದೇಶದಲ್ಲಿ ತನ್ನ ಅಸ್ತಿತ್ವ ಇರಬೇಕೆಂದು ವಾದಿಸುತ್ತಿತ್ತು. ನೆಹರೂ ಚೌ ಎನ್ ಲಾಯರ ಮಾತುಕತೆ ಇನ್ನೂ ನಡೆದಿರುವಾಗಲೇ ಭಾರತೀಯ ಪತ್ರಿಕೆಗಳು ಪ್ರತಿಕೂಲವಾಗಿ ಬರೆದು ವಿರೋಧಿ ಪಕ್ಷಗಳು ಭಾರತದ ಒಂದು ತುಂಡು ನೆಲವನ್ನೂ ಬಿಟ್ಟು ಕೊಡಲಾರೆವು ಎಂದುದರ ಪರಿಣಾಮವಾಗಿ ಈ ಒಪ್ಪಂದ ಮುರಿಯಿತು. ಪಂ. ನೆಹರೂ ವ್ಯಕ್ತಿಗತವಾಗಿ ಒಪ್ಪಂದಕ್ಕೆ ಹೇಳಿದ ಉತ್ಸುಕರಾಗಿದ್ದರು; ಆದರೆ ಪತ್ರಿಕೆಗಳು ವಿರೋಧಿ ಪಕ್ಷಗಳು ಮತ್ತು ಸಚಿವ ಸಂಪುಟದಲ್ಲಿಯ ಶ್ರೀ ಮುರಾರಜಿ ದೇಸಾಯಿ ಮುಂತಾದವರ ವಿರೋಧದಿಂದ ನಿರುತ್ಸಾಹಿತರಾದರು. ಒಂದು ವೇಳೆ ನಿಯೋಜಿತ ಒಪ್ಪಂದವಾಗಿದ್ದಲ್ಲಿ ಮುಂದಾಗುವ ಆಕ್ರಮಣವನ್ನು ತಡೆಯಬಹುದಿತ್ತು.

ಚೀನದಲ್ಲಿ ನಮ್ಮ ರಾಯಭಾರಿಯಾಗಿದ್ದ ಪಣಿಕ್ಕರ್ ನೀಡಿದ ಮಾಹಿತಿಯ ಪ್ರಕಾರ ಚೀನ ಭಾರತದ ಮೇಲೆ ದಾಳಿ ಮಾಡಲಾರದು ಎಂದು ಸರಕಾರ ಭಾವಿಸಿತು. ಆದರೆ ಸೈನ್ಯಪಡೆಯ ಮುಖ್ಯಸ್ಥ ಜನರಲ್ ತಿಮ್ಮಯ್ಯ ಮತ್ತು ಇತರ ಅಧಿಕಾರಿಗಳ ಮನಸ್ಸಿನಲ್ಲಿ ಚೀನದ ಬಗ್ಗೆ ಸಂಶಯವಿತ್ತು. ಮಾವೋ ನುರಿತ ಮುತ್ಸದ್ದಿ. ವಿಸ್ತರಣಾವಾದಿಯಾಗಿದ್ದ ಚೀನದ ಬೆಳೆಯುತ್ತಿರುವ ಜನಸಂಖ್ಯೆಗೆ ನೆಲ ಬೇಕಾಗಿತ್ತು. ದಕ್ಷಿಣ ಏಶಿಯಾದಲ್ಲಿ ಬಂದರ ಬೇಕಾಗಿತ್ತು. ತನ್ನ ಪ್ರತಿಸ್ಪರ್ಧಿಯಾಗಬಹುದಾದ ಭಾರತವನ್ನು ತನ್ನ ಸೈನಿಕ ಶಕ್ತಿಯ ಪ್ರದರ್ಶನದ ಮೂಲಕ ಕುಂಗೆಡಿಸಬೇಕಾಗಿತ್ತು. ಪಂ. ನೆಹರೂರ ವರ್ಚಸ್ಸನ್ನು ಕಡಿಮೆ ಮಾಡಬೇಕಾಗಿತ್ತು. [illegible]. ನೇಫಾ, ಪ್ರದೇಶದ ಮೇಲೆ ಮಿಂಚಿನ ವೇಗದಲ್ಲಿ ದಾಳಿ ನಡೆಸಿತು.

ಈ ದಾಳಿಯನ್ನು ಪ್ರತಿರೋಧಿಸುವ ಶಕ್ತಿ ನಮ್ಮ ಸೈನ್ಯ ಪಡೆಯಲ್ಲಿ ಇಲ್ಲ. ಅದು ಸಿದ್ಧವಾಗಿದ್ದಿಲ್ಲ. ಎತ್ತರದ ಹಿಮ ಪ್ರದೇಶದಲ್ಲಿ ಸೈನಿಕ ಕಾರ್ಯಾಚರಣೆಯನ್ನು ನಡೆಸುವಂಥ, ಅಲ್ಲಿ ಬೀಸುವ ಗಾಳಿ, ಬೀಳುವ ಹಿಮ ಸಹಿಸಿಕೊಳ್ಳುವಂಥ ಅನುಭವ ತರಬೇತಿ ಪಡೆದ ಸೈನ್ಯವಿದ್ದಿಲ್ಲ. ಆಗ ರಕ್ಷಣಾ ಮಂತ್ರಿಯಾಗಿದ್ದ ವಿ.ಕೆ. ಕೃಷ್ಣ ಮೆನನ್ನರೂ ಸಾಕಷ್ಟು ಮುಂಜಾಗ್ರತೆಯ ಕ್ರಮ

ತೆಗೆದುಕೊಂಡಿರಲಿಲ್ಲ. ನುರಿತ ಸೈನಿಕ ಅಧಿಕಾರಿಗಳ ಸಲಹೆ ಕೇಳಲಿಲ್ಲ. ಕೃಷ್ಣ ಮೆನನ್ನರ ಮುಂಗೋಪಿ ಧೋರಣೆ ನಡುರಾತ್ರಿಯಲ್ಲಿ ಸೈನಿಕ ಮುಖ್ಯಸ್ಥರಿಗೆ ಫೋನ್ ಮಾಡಿ ಎಚ್ಚರಿಸುವ ವಿಚಿತ್ರ ಪದ್ಧತಿ, ತಾನೇ ಎಲ್ಲವನ್ನೂ ಬಲ್ಲೆ ಎನ್ನುವ ದಟಪೂರಿತನ ಅವರನ್ನು ಉತ್ತಮ ರಕ್ಷಣಾ ಮಂತ್ರಿಯನ್ನಾಗಿ ಮಾಡಲಿಲ್ಲ. ಸೈನ್ಯ ಪಡೆಯ ಮುಖ್ಯ ಕಾರ್ಯಾಲಯ ಆಧುನಿಕ ಉಪಕರಣಗಳ ಕೊರತೆ ಕುರಿತು ತನ್ನ ರಕ್ಷಣಾ ಮಂತ್ರಿಗೆ ಅನೇಕ ಸಲ ಬರೆದರೂ ಕೃಷ್ಣ ಮೆನನ್ ಕಿವಿಯಲ್ಲಿ ಹತ್ತಿ ಇಟ್ಟುಕೊಂಡು ಚೀನ ದಾಳಿ ಮಾಡುವದಿಲ್ಲ ಎನ್ನುವ 'ಶಾಂತಿಮಂತ್ರ' ಪಠಿಸುತ್ತಲೇ ಇರುತ್ತಿದ್ದರು. ಚೀನ ಗಡಿಯಾಚೆ ತನ್ನ ಸ್ಥಿತಿಯನ್ನು ಭದ್ರಪಡಿಸಿಕೊಳ್ಳುತ್ತಲೇ ಇತ್ತು. ಲಡಾಖಿನ ಧೋಲಾ ಸಮೀಪ ಒಂದು ಬ್ರಿಗೇಡ್ ತುಸು ಹಿಂದೆ ಒಂದು ಡಿವಿಜನ್ ಮತ್ತು ನೇಫಾದ ಬದಿಯಲ್ಲಿ ನಾಲ್ಕು ಡಿವಿಜನ್ ಚೀನದ ಸೈನ್ಯವಿತ್ತು. ಜನರಲ್ ಕೌಲ್ ಅವರನ್ನು ಅಕ್ಟೋಬರ್ ೫ ರಂದು ನೇಫಾದಲ್ಲಿ ಕಮಾಂಡರ್ ಎಂದು ನೇಮಿಸಲಾಯಿತು. ಆದರೆ ಅನಾರೋಗ್ಯದ ಮೂಲಕ ಅವರು ದಿಲ್ಲಿಗೆ ಮರಳಿದ್ದರಿಂದ ಜನರಲ್ ಹರಬಕ್ಷ ಸಿಂಗರನ್ನು ಅವರ ಸ್ಥಾನದಲ್ಲಿ ನೇಮಿಸಲಾಯಿತು. ಜನರಲ್ ಹರಬಕ್ಷರು ತಮ್ಮ ಹುದ್ದೆಯನ್ನು ವಹಿಸಿಕೊಳ್ಳುವ ಮಾರ್ಗದಲ್ಲಿರುವಾಗಲೇ ಚೀನಾ ಹಠಾತ್ತನೇ ೨೦ ಅಕ್ಟೋಬರಿನಂದು ಆಕ್ರಮಣ ನಡೆಸಿತು.



ಪಂಚಶೀಲ ತತ್ವಗಳನ್ನು ಗಾಳಿಗೆ ತೂರಿ ಚೀನ ದಾಳಿ ಮಾಡಿತು. ಈ ದಾಳಿಯ ಹಿನ್ನೆಲೆಯಲ್ಲಿ ಸೈನ್ಯ ಪಡೆಯ ಮುಖ್ಯಸ್ಥ ಜನರಲ್ ಪಿ. ಎನ್. ಥಾಪರ್ ಮೆನನ್ನರನ್ನು ಭೆಟ್ಟಿಯಾದಾಗ "ಚೀನ ದಾಳಿ ಮಾಡುವದೆಂದು ನನಗೇನು ಗೊತ್ತು?" ಎಂದು ನುಡಿದರಂತೆ. ಬೊಮ್ಡಿಲಾ ಚೀನಾದ ವಶವಾಯಿತು. ಜನರಲ್ ಥಾಪರ್ ತಮ್ಮ ರಾಜೀನಾಮೆಯನ್ನು ವ್ಯಕ್ತಿಗತವಾಗಿ ನೆಹರೂರವರಿಗೆ ಸಲ್ಲಿಸಿದರು. ಆದರೆ ನೆಹರೂ ಮೊದಲು ರಾಜನಾಮೆಯನ್ನು ಸ್ವೀಕರಿಸಲಿಲ್ಲ. ಆದರೆ ಚೀನ ಬ್ರಹ್ಮಪುತ್ರ ಕೊಳ್ಳದತ್ತ ಮುನ್ನುಗ್ಗುತ್ತಿರುವ ಸಮಯದಲ್ಲಿ ಥಾಪರರ ರಾಜೀನಾಮೆಯನ್ನು ಸ್ವೀಕರಿಸಿದರಂತೆ.

ದೇಶದಲ್ಲಿ ಬಿಸಿ ಮತ್ತು ಬಿಗುವಿನ ವಾತಾವರಣ ಕಂಡುಬರುತ್ತಿತ್ತು. ದೇಶ ಒಬ್ಬ ವ್ಯಕ್ತಿಯ ಬಲಿದಾನ ಬೇಡುತ್ತಿತ್ತು. ದೇಶದ ಜನತೆ, ವಿರೋಧಿ ಪಕ್ಷಗಳು ಆಡಳಿತ ಪಕ್ಷದ ಹಿರಿಯ ಮುಂದಾಳುಗಳು ಎಲ್ಲರಿಗೂ ಕೃಷ್ಣ ಮೆನನ್ನರ ಮೇಲೆ ಕೋಪವಿತ್ತು. ಈ ಎಲ್ಲ ಹಗರಣದ ಕೇಂದ್ರ ಬಿಂದು ಕೃಷ್ಣ ಮೆನನ್ನರೆಂದು ಮನದಟ್ಟಾಗಿತ್ತು. ಹರಿತ ಮಾತು ಸಡಿಲ ನಾಲಿಗೆ ಅಮೇರಿಕಾ ವಿರೋಧಿ ಧೋರಣೆಯಿಂದ ಅವರು ಪಂ. ನೆಹರೂರವರನ್ನು ಬಿಟ್ಟು ಯಾರಿಗೂ ಬೇಡವಾಗಿದ್ದರು. ಅವರನ್ನು ರಾಜಕಾರಣದಲ್ಲಿ ತಂದವರು ನೆಹರೂ. ಅವರ ಸ್ಥಾನ ಭಾರತೀಯ ರಾಜಕಾರಣದಲ್ಲಿ ಗಟ್ಟಿಯಾಗಿದ್ದಿಲ್ಲ. ಅವರ ಪ್ರಾಂತ

ವಾದ ಕೇರಳದಲ್ಲಿಯೇ ಅವರಿಗೆ ಹಿಂಬಾಲಿಗರು ಅನುಯಾಯಿಗಳು ಇದ್ದಿಲ್ಲ. ಲಂಡನ್ನಿನಲ್ಲಿ ಭಾರತೀಯ ಹೈಕಮೀಶನರ್ ಎಂದು ಕೆಲಸ ಮಾಡಿದಾಗಲೇ ಅವರ ಕಾರ್ಯನಿರ್ವಹಣೆಯನ್ನು ಕುರಿತ ಟೀಕೆಗಳು ಕೇಳಿಬರುತ್ತಿದ್ದವು. ಕೃಷ್ಣ ಮೆನನ್ನರು ಕೂಡಲೇ ರಾಜಿನಾಮೆ ಕೊಡಬೇಕೆಂದು ದೇಶ ಬೇಡುತ್ತಿತ್ತು. ಆದರೆ ಅವರಿಗೆ ನೆಹರೂರ ಆಶ್ರಯ ಇದ್ದುದರಿಂದ ರಾಜಿನಾಮೆ ಕೇಳಿ ಪಡೆಯುವುದು ಸಾಧ್ಯವಾಗಿದ್ದಿಲ್ಲ. ಕೃಷ್ಣ ಮೆನನ್ನರ ಪಾಂಡಿತ್ಯಪೂರ್ಣವಾದ ಇಂಗ್ಲಿಷ್ ಭಾಷೆ, ನಿರಾಂತಕವಾಗಿ ಮಾತನಾಡುವ ವೈಖರಿ ಯಾರಿಗೂ ತಲೆಬಾಗದ ವ್ಯಕ್ತಿತ್ವ ನೆಹರೂರವರಿಗೆ ಪ್ರಿಯವಾಗಿತ್ತು. ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕಿದ ಕೂಡಲೇ ಬ್ರಿಟಿಶ್ ಪ್ರಧಾನಿ ಆಟ್ಲೀಯವರು ಭಾರತ ಜಾನ್ ಮಥಾಯ್ ಇಲ್ಲವೆ ಡಾ. ರಾಧಾಕೃಷ್ಣನ್ ಇವರನ್ನು ಹೈಕಮೀಶನರೆಂದು ಕಳುಹಿಸಿಕೊಡಬೇಕೆಂದು ಕೇಳಿಕೊಂಡಾಗಲೂ ಸರದಾರ ಪಟೇಲರ ವಿರೋಧವನ್ನು ಲೆಕ್ಕಕ್ಕೆ





"ದೊಡ್ಡ ಪ್ಲೇನಿಗೆ ಹ್ಯಾಗೆ ಪೇಂಟ್ ಮಾಡ್ತಾರೆಲ್ಲಾ, ಮೇಲಕ್ಕೋದಾಗ ಚಿಕ್ಕದಾಗಿರತ್ತಲ್ಲಾ – ಆಗ..."

ತಾರದೇ ಕೃಷ್ಣ ಮೆನನ್ನರನ್ನು ನೇಮಿಸಿದ್ದು, ಕೃಷ್ಣ ಮೆನನ್ನರ ಬಗ್ಗೆ ನೆಹರೂರ ಆತ್ಮೀಯ ಭಾವನೆ ಮೆಚ್ಚುಗೆ ವ್ಯಕ್ತವಾಗುತ್ತದೆ. ಬಹುಶಃ ರಫಿ ಅಹ್ಮದ್ ಕಿದವಾಯಿಯವರನ್ನು ಬಿಟ್ಟರೆ ನೆಹರೂರವರ ನಚ್ಚಿನ ಮಿತ್ರನೆಂದರೆ ಕೃಷ್ಣ ಮೆನನ್ನರೇ! ಇಂತಹ ಸ್ನೇಹಿತರನ್ನು ನೆಹರೂ ಬಿಟ್ಟು ಬಿಡುವರೇನೆಂದು ದೇಶ ಕಾದು ನೋಡುತ್ತಿತ್ತು.

ಪಂಡಿತಜೀಯ ತಂಗಿ ಶ್ರೀಮತಿ ವಿಜಯಲಕ್ಷ್ಮಿ ಪಂಡಿತ, ರಾಧಾಕೃಷ್ಣನ್ ಮತ್ತು ಲಾಲಬಹಾದ್ದೂರ ಶಾಸ್ತ್ರಿ ಇವರೆಲ್ಲರ ಪ್ರಕಾರ ನೆಹರೂರಲ್ಲಿ ಕಂಡುಬರುವ ದೊಡ್ಡ ಕೊರತೆಯೆಂದರೆ ಅವರು ತಮ್ಮ ಮಿತ್ರರನ್ನು ಆಯ್ದುಕೊಳ್ಳುವಾಗ ವಿವೇಕವನ್ನು ಕಡೆಗಣಿಸುತ್ತಿದ್ದರು ಎಂಬುದು. ಅಲ್ಲದೆ ತಮ್ಮ ಅನುಯಾಯಿಗಳೆಂದ ಕೊಳ್ಳುತ್ತಿದ್ದ ಅನೇಕರಲ್ಲಿ ಯಾರು ಒಳ್ಳೆಯವರು ಯಾರು ಕೆಟ್ಟವರು ಎಂಬುದನ್ನು ಪರೀಕ್ಷಿಸುವ ಗೋಜಿಗೆ ಹೋದವರಲ್ಲ. ಒಂದು ವೇಳೆ ಕೆಲವರ ಕೆಟ್ಟತನದ ಬಗ್ಗೆ ತಿಳಿದಾಗಲೂ ಅವರ ಮನಸ್ಸನ್ನೇಕೆ ನೋಯಿಸುವುದೆಂದು ತೆಪ್ಪಗಿದ್ದು ಬಿಡುವಷ್ಟು ಮೃದು ಸ್ವಭಾವ ನೆಹರೂರವರದು. ಅಂತೆಯೇ ಆಲದ ಮರದ ನೆರಳಿನಲ್ಲಿ ಅನೇಕರು ತಂತಮ್ಮ ಬೊಜ್ಜು ಬೆಳೆಸಿಕೊಂಡುಬಿಟ್ಟರು. ಈಗ ತಪ್ಪಿತಸ್ಥರೆಂದು ನಂಬಿದ್ದ ಕೃಷ್ಣ ಮೆನನ್ನರನ್ನು ನೆಹರೂ ಕೈಬಿಡುವರೇ ಎಂಬ ಯಕ್ಷಪ್ರಶ್ನೆಗೆ ಭಾರತವೆಲ್ಲ ಉತ್ತರವನ್ನರಸುತ್ತಿತ್ತು.

ತೆರೆಯಮರೆಯಲ್ಲಿ ಭಾರೀ ಪ್ರಯತ್ನಗಳು ನಡೆದಿದ್ದವು. ಕಾಂಗ್ರೆಸ್ ಪಕ್ಷದ ಹಿರಿಯರು ಮಾತುಕತೆಗಳಲ್ಲಿ ತೊಡಗಿದ್ದರು. ಪಕ್ಷದ ಕಾರ್ಯಕಾರಣಿ ಮಂಡಳದ ಸದಸ್ಯರು ಯಾವ ರೀತಿಯಲ್ಲಿ ಚರ್ಚೆ ನಡೆಸಬೇಕು, ಯಾರು ಏನು ಮಾತಾಡಬೇಕು, ಎಂದು ರಂಗತಾಲೀಮನ್ನು ಸಾಕಷ್ಟು ನಡೆಸಲಾಯಿತು. ನೆಹರೂರ ಮನವೊಲಿಸುವ ಕಾರ್ಯದ ಭಾರ ಪಕ್ಷದ ಉಪಧುರೀಣರಾಗಿದ್ದ ಮಹಾವೀರತ್ಯಾಗಿ ಮಹತಾಬ ಪಕ್ಷದ ಮಾಜಿ ಪ್ರತಿನಿಧಿ ಮತ್ತು ಸಂಸದೀಯ ವಿಷಯದ ಮಂತ್ರಿ ಸತ್ಯನಾರಾಯಣ ಸಿನ್ಹಾ ಮತ್ತು ಸಿಂಹವನ್ನು ಸಿಂಹದ ಗವಿಯಲ್ಲಿಯೇ ಎದುರಿಸಲು

ಸಿದ್ಧರಾದ ಮಹಾವೀರ ತ್ಯಾಗಿಯವರ ಮೇಲಿತ್ತು. ಮಹಾವೀರ ತ್ಯಾಗಿ ಏನೇ ಸೂಚಿಸುವಂತೆ ಮಹಾವೀರರು ನೆಹರೂರ ಆಪ್ತ ಮಿತ್ರರು. ಒಡನಾಡಿಗಳು. ಮನಸ್ಸನ್ನು ಅರಿತವರು. ಕಿವಿಯಿಂದಲೂ ಬಿಂಜರಿಯುವ ಆಸಾ ದೋಸ್ತರು.

ಪಕ್ಷದ ಸಭೆ ಸೇರಿದೆ. ಪ್ರತಿಯೊಬ್ಬರ ಮನಸ್ಸಿನಲ್ಲಿಯೂ ಕಳವಳ, ದುಗುಡ. ಮುಂದೆ ಏನಾಗುವುದೋ ಗೊತ್ತಿಲ್ಲ. ತಮ್ಮ ಧುರೀಣ ಮುಂದಿಟ್ಟ ಮನವಿ ಪ್ರಾರ್ಥನೆಯನ್ನು ಅಂಗೀಕರಿಸದೇ ಇದ್ದಲ್ಲಿ ಮುಂದೇನು? ಒಬ್ಬರು ಮತ್ತೊಬ್ಬರನ್ನು ನೋಡುತ್ತಿದ್ದಾರೆ. ಹೆದರುತ್ತಾ ಮೆನನ್ನರನ್ನು ಸಚಿವಸಂಪುಟದಿಂದ ಕೈಬಿಡುವ ಸೂಚನೆ ಮಂಡಿಸಲಾಗಿದೆ. ಎಲ್ಲರೂ ಧುರೀಣನ ಮುಖ ನೋಡುತ್ತಿದ್ದಾರೆ. ಮುಗುಳು ನಗೆ ಮಾಯವಾಗಿ ಮುಖದಲ್ಲಿ ಕೋಪ ಕಂಡುಬಂದು. ನೆಹರೂರ ಕೋಪ ವಿಶಿಷ್ಟವಾದದ್ದು. ಅದನ್ನು ಶಿವನ ಮೂರನೇ ಕಣ್ಣಿಗೆ ಹೋಲಿಸಬಹುದು. ಆದರೆ ಅದು ಕೂಡಲೆ ಶಾಂತವಾಗುವುದು. "ಏನು ಕೃಷ್ಣ ಮೆನನ್ನರ ರಾಜೀನಾಮೆಯೆ? ಸಾಧ್ಯವಿಲ್ಲ. ನೀವು ಏನು ತಿಳಿದಿದ್ದೀರಿ?" ಗುಡುಗಿದರು. ಸಭೆಯಲ್ಲಿ ಯಾವುದೇ ಗಡಿಬಿಡಿ ಇಲ್ಲ. ಶಾಂತವಾಗಿದೆ. ಮಹಾವೀರ ತ್ಯಾಗಿ ಧೈರ್ಯದಿಂದ, "ಸ್ವಾಮಿ ದಯವಿಟ್ಟು ವಿಚಾರಿಸಿ, ದೇಶಕ್ಕಿಂತ ಯಾರೂ ದೊಡ್ಡವರಲ್ಲ. ಕೃಷ್ಣ ಮೆನನ್ನರು ರಾಜೀನಾಮೆ ಕೊಡುವುದು ಉತ್ತಮ. ಅವರು ರಾಜೀನಾಮೆ ಕೊಡಲೇ ಬೇಕು. ಇಲ್ಲದಿದ್ದಲ್ಲಿ..." ಮಾತು ಅರ್ಧದಲ್ಲಿರುವಾಗಲೇ "ನಿಮ್ಮೆಲ್ಲರನ್ನೂ ಪಕ್ಷದಿಂದ ಹೊರಗೆ ಹಾಕಬೇಕಾದೀತು," ಎನ್ನುತ್ತಾ ನೆಹರೂ ಸಭೆಯಿಂದ ಹೊರಗೆ ಹೋದರು.

ಅವರು ಸಭೆಯಿಂದ ಹೊರಗೆ ಹೋಗುತ್ತಿರುವಾಗಲೇ 'ತಕ್ಷಕಾಯ ಸ್ವಾಹಾ ಇಂದ್ರಾಯ ಸ್ವಾಹಾ' ಎನ್ನುವ ಮಾತು ಕೇಳಿಬಂದಿತು. ಸತ್ಯನಾರಾಯಣ ಸಿನ್ಹಾ ಮತ್ತು ಆ ರಾತ್ರಿ ನೆಹರೂರವರನ್ನು ಅವರ ಮನೆಯಲ್ಲಿ ಭೆಟ್ಟಿಯಾದರು. ನೆಹರೂ ಸಂಸ್ಕೃತ ವಾಕ್ಯವಾದ 'ತಕ್ಷಕಾಯ ಸ್ವಾಹಾ ಇಂದ್ರಾಯ ಸ್ವಾಹಾ' ಎನ್ನುವದರ ಅರ್ಥವನ್ನು ಕೇಳಿ ತಿಳಿದುಕೊಂಡರು. ಮೆನನ್ನರನ್ನು ರಕ್ಷಿಸಿದಲ್ಲಿ ತನಗೂ ಗಂಡಾಂತರವನ್ನು ಸ್ಥಾನಕ್ಕೂ ಧಕ್ಕೆಯುಂಟಾಗಬಹುದು. ಚೀನದ ಆಕ್ರಮಣದಿಂದ ತಮ್ಮ ಪರಿಸ್ಥಿತಿ ಪಕ್ಷದ ಮೇಲಿನ ನಿಯಂತ್ರಣ ಸಡಿಲಾಗಿದೆ. ಈ ಸಂದರ್ಭದಲ್ಲಿ ಮೆನನ್ನರನ್ನು ತ್ಯಾಗ ಮಾಡದಿದ್ದಲ್ಲಿ ಪರಿಸ್ಥಿತಿ ಹದಗೆಡಬಹುದು ಎನ್ನುವದರ ಅರಿವು ಉಂಟಾಗಿ ಮನಸ್ಸಿಗೆ ನೋವಾಯಿತು. ಭಾವುಕರಾದ ಅವರು ವ್ಯಥಿತರಾದರು. ಈ ಸಮಯದಲ್ಲಿ ಲಾಲಬಹಾದ್ದೂರ ಶಾಸ್ತ್ರಿಯವರೂ ನೆಹರೂರನ್ನು ಭೆಟ್ಟಿಯಾಗಿ ದೇಶಕ್ಕಾಗಿ ಪಕ್ಷದ ಹಿತಕ್ಕಾಗಿ ಮತ್ತು ಪರ್ಯಾಯವಾಗಿ ಅವರ ವೈಯಕ್ತಿಕ ಹಿತದ ದೃಷ್ಟಿಯಿಂದ ಮೆನನ್ನರನ್ನು ಕೈ ಬಿಡಲು ಸಲಹೆ ನೀಡಿದರು. ದೇಶಕ್ಕಾಗಿ ಅಪಾರ ತ್ಯಾಗ ಮಾಡಿದ ನೆಹರೂರವರನ್ನು ದೇಶ ಕ್ಷಮಿಸಬಹುದಿತ್ತು. ಆದರೆ ಮೆನನ್ನರನ್ನು ಎಂದೂ ಕ್ಷಮಿಸಲು ಸಿದ್ಧವಿದ್ದಿಲ್ಲ. ಮೆನನ್ನರು ತಮ್ಮ ಗೋರಿಯನ್ನು ತಾವೇ ತೋಡಿಕೊಂಡರು. ಬುದ್ಧಿವಂತರಾದ ಚಾಣಾಕ್ಷರಾದ ಕಲ್ಪನಾಶಕ್ತಿಯುಳ್ಳ ಮೆನನ್ನರು ರಕ್ಷಣಾ ಖಾತೆಯ ದಕ್ಷತೆಯನ್ನು ಹೆಚ್ಚಿಸಿದರು. ಸ್ವಯಂಪೂರ್ಣತೆಯನ್ನು ಸಾಧಿಸಿದರು. ಸೈನಿಕ ಶಸ್ತ್ರಾಸ್ತ್ರಗಳನ್ನು ಉತ್ಪಾದಿಸಲು ಹಲವಾರು ಯೋಜನೆಗಳನ್ನು ಕಾರ್ಯಾಚರಣೆಯಲ್ಲಿ ತಂದರು. ಆದರೆ ಇವೆಲ್ಲವುಗಳ ಮೂಲಕ ಮಹತ್ವಾಕಾಂಕ್ಷಿಯಾಗಿ ಅಧಿಕಾರದಲ್ಲಿ ಇನ್ನಷ್ಟು ಮೇಲೆ ಬರಲು ನೆಹರೂ ಕೃಪಾದೃಷ್ಟಿಯ ಆಧಾರದಿಂದ ಪ್ರಯತ್ನಿಸಿದರು. ಇದು ಇತರ ರಾಜಕಾರಣಿಗಳಿಗೆ ಸರಿ ಬರಲಿಲ್ಲ.

ಒಂದು ವೇಳೆ ಮೆನನ್ನರು ದೇಶದ ರಾಜಕಾರಣದಲ್ಲಿ ಭದ್ರವಾಗಿ ಬೇರೂರಿದ್ದಲ್ಲಿ ಇದಾ ಸಾಧ್ಯವಾಗಬಹುದಿತ್ತೇನೋ. ಮೆನನ್ನರು ಕಮ್ಯುನಿಸ್ಟರು ಎನ್ನುವ ಕೂಗು ಕೇಳಿ ಬರುತ್ತಿತ್ತು. ಅವರು ಅಮೇರಿಕದ ಕಟ್ಟಾ ವೈರಿಗಳಾಗಿದ್ದರಿಂದ ಅಮೇರಿಕ ಪರ ಮುಖಂಡರು ಅವರ ಬೆನ್ನು ಹತ್ತಿದರು. ಇವೆಲ್ಲವುಗಳ ಪರಿಣಾಮವಾಗಿ ನೆಹರೂ ತುಂಬಾ ವ್ಯಥೆಯಿಂದ ಮೆನನ್ನರನ್ನು ಸಚಿವ ಸಂಪುಟದಿಂದ ಕೈಬಿಡಲು ನಿರ್ಧರಿಸಿದರು. ಮೆನನ್ನರು ರಾಜೀನಾಮೆ ಕೊಡಬೇಕಾಯಿತು. ✡

# ದೇವನೊಬ್ಬ ನಾಮ ಹಲವು

ಧರ್ಮಗಳು ಹಲವಾರು,
ಜಾತಿಗಳು ನೂರಾರು
ಒಂದೇ ಅರ್ಥದ ಬೇರೆ ಬೇರೆ ಶಬ್ದಗಳು
ಒಂದೇ ಗುರಿಗೆ ಬೇರೆ ಬೇರೆ ದಾರಿಗಳು.

ಹಿಂದೂ, ಜೈನ, ಬೌದ್ಧ, ಮುಸ್ಲಿಮ್, ಕ್ರೈಸ್ತ, ಪಾರಸಿ ಧರ್ಮಗಳು ಬೇರೆ ಬೇರೆಯಾದರೂ ಸಮಾಜ ಒಂದೇ—ದೇಶ ಒಂದೇ. ಧರ್ಮದ ದೃಷ್ಟಿಯಲ್ಲಿ ಎಲ್ಲ ಜಾತಿ, ಮತ ಸರಿಸಮಾನ. ನಮ್ಮ ಧರ್ಮವು ನಮಗೆ ಪ್ರಿಯವಿದ್ದಷ್ಟೆ, ಇತರರ ಧರ್ಮವು ಅವರವರಿಗೆ ಪ್ರಿಯವಾದದ್ದು. ಒಂದೇ ದೇಶದಲ್ಲಿ, ಒಂದೇ ಸಮಾಜದಲ್ಲಿ ಒಂದು ಧರ್ಮದವರು ಮತ್ತೊಂದು ಧರ್ಮದವರಿಗಿಂತ ಉತ್ತಮರೆಂದು ನಡೆದುಕೊಳ್ಳುವುದು ಮನುಷ್ಯ ಜಾತಿಗೇ ದ್ರೋಹ ಬಗೆದಂತೆ. ಎಲ್ಲರೂ ಒಪ್ಪುವಂತಹ ಮಾತಿದು; ಒಪ್ಪಿದ್ದೇವೆ, ಒಪ್ಪಿದಂತೆ ನಡೆದುಕೊಂಡರೆ, ನಮಗೂ ಕ್ಷೇಮ, ನಾಡಿಗೂ ಶ್ರೇಯಸ್ಸು.

"ನನ್ನ ದೇವರು ಅನಂತ ರೂಪಿ; ಒಮ್ಮೆ ಜಾತೀಯ
ಐಕ್ಯದ ರೂಪದಲ್ಲಿ ಇನ್ನೊಮ್ಮೆ ಅಸ್ಪೃಶ್ಯತಾ
ನಿವಾರಣೆಯ ರೂಪದಲ್ಲಿ ಅವನು ದರ್ಶನ ಕೊಡುವನು..."

—ಗಾಂಧೀಜಿ

ಪ್ರಕಟಣೆ: **ಕರ್ನಾಟಕ ಸರ್ಕಾರದ ವಾರ್ತಾ ಮತ್ತು ಪ್ರಚಾರ ಇಲಾಖೆ**
**ಬೆಂಗಳೂರು-೧.**

DIP/122/82=83

# (ಸಂ)ವೇದನೆ

ಮೂಲ : **ಕೋರುಕೊಂಡ ಸತ್ಯಾನಂದ**

ಕನ್ನಡಕ್ಕೆ : **ಶ್ರೀಮತಿ ಶರ್ವಾಣಿ**

ಕಂಜರದ ಶಬ್ದ ಸಿಡಿಲಿನ ಶಬ್ದದಂತೆ ಆ ಪ್ರದೇಶವನ್ನೆಲ್ಲಾ ಆಕ್ರಮಿಸಿಕೊಂಡಿತ್ತು.

ಆ ಶಬ್ದದಲ್ಲಿ ಉದ್ವೇಗವಿತ್ತು.

ಆವೇಶವಿತ್ತು.

ಆವೇದನೆಯೂ ಇತ್ತು.

ಆ ಊರಿನ ಒಂದು ದೊಡ್ಡ ಮನೆಯ ಮುಂದೆ ಊರಿನ ಜನ ಗುಂಪುಗೂಡಿದ್ದರು. ಅವರಿಗೆಲ್ಲಾ ಶಿಳ್ಳೆ ಹಾಕಲೂ ಕೇಕೆ ಹಾಕಲೂ ಬರುತ್ತಿತ್ತು. ಕೂಗಾಡಲೂ ಬಲ್ಲರು. ಆದರೂ ನಿಶ್ಶಬ್ದವಾಗಿ ನೋಡುತ್ತಿದ್ದರು. ಅದಕ್ಕೆ ಕಾರಣ ಆ ಮನೆಯ ಎತ್ತರವಾದ ಜಗುಲಿಯ ಮೇಲೆ ಆರಾಮುಖುರ್ಚಿಯಲ್ಲಿ ಪ್ರೆಸಿಡೆಂಟ್ ಪರಶುರಾಮಯ್ಯನವರು ಆಸೀನರಾಗಿದ್ದುದೇ ಆಗಿತ್ತು.

ಭಾರೀ ವಿಗ್ರಹ ಆತನದು. ಆತನ ಕಣ್ಣು ಕೆಂಪಾದರೆ ಆ ಊರಿನ ಜನ ಪರಮಶಿವ ಮೂರನೆ ನೇತ್ರವನ್ನು ತೆರೆದಂತೆ ಹೆದರುತ್ತಿದ್ದರು. ಆತ ಕೋಪದಿಂದ ಕೂಗಾಡಿದರೆ ಸಿಂಹ ಗರ್ಜನೆ ಕೇಳಿದವರಂತೆ ನಡುಗುತ್ತಿದ್ದರು. ಆತನ ಕೈಯಲ್ಲಿ ಬೆಲೆ ಬಾಳುವ ಚುಟ್ಟಾ ಇತ್ತು. ಒತ್ತಾದ ಆತನ ಮೀಸೆಯ ಕೆಳ ಭಾಗದಲ್ಲಿ ಕಂದುಗಟ್ಟಿದಂತಿದ್ದ ಕಪ್ಪನೆಯ ತುಟಿಗಳ ಮಧ್ಯೆ ಆ ಚುಟ್ಟಾ ಇರಿಸಿ ಎದೆಯ ತುಂಬಾ ಹೊಗೆ ಸೇದಿ ಬಿಡುತ್ತಾ. ವಿಲಾಸದಿಂದ ನೋಡುತ್ತಿದ್ದ.

ಆತನ ದೊಡ್ಡ ಕಣ್ಣುಗಳು ಬೀದಿಯ ಬಾಗಿಲಿನಲ್ಲಿ ನಡೆಯುತ್ತಿದ್ದ ದೃಶ್ಯವನ್ನು ನೋಡುತ್ತಿದ್ದವು.

ಅವಳು ಕಂಜರಿಯನ್ನು ಒಂದು ಕೈಯಲ್ಲಿ ಹಿಡಿದು ಲಯಬದ್ಧವಾಗಿ ಬಾರಿಸುತ್ತಿದ್ದಳು.

ಎದುರಾಗಿ ನಿಂತಿದ್ದ ಅವನು ಅವನ ಮೈ ಮೇಲೆ ಲಂಗೋಟಿಯ ಹೊರತು ಬೇರೇನೂ ಇರಲಿಲ್ಲ. ಅವನ ಶರೀರ ಮಾಂಸಖಂಡಗಳ ಹಂದರದಂತಿತ್ತು. ತಲೆಯ ತುಂಬಾ ಬೆಳೆದ ಜಟೆಯಂಥ ಕೂದಲು ಹಣೆಯ ಮೇಲೂ ಬಿದ್ದಿತ್ತು.

ಅವನ ಕೈಯಲ್ಲಿ ದಪ್ಪನೆಯ ಚಾಟಿ. ಅದನ್ನು ಝಳಪಿಸುತ್ತಿದ್ದ.

ಝಳಪಿಸಿದ ಚಾಟಿಯನ್ನು ಮೇಲೆತ್ತಿ ತನ್ನನ್ನು ತಾನೇ ಹೊಡೆದುಕೊಳ್ಳುತ್ತಿದ್ದ. ಆ ಚಾಟಿ ಬೆನ್ನನ್ನು ಸರ್ರೆಂದು ತಗುಲಿ ಅವನ ದೇಹವನ್ನು ಸುತ್ತಿ ಮತ್ತೆ ಸಡಿಲಾಗುತ್ತಿತ್ತು

ಅವನು ಮತ್ತೆ ಅವನ್ನು ಮೇಲಕ್ಕೆತ್ತಿ ಹೊಡೆದು ಕೊಳ್ಳುತ್ತಿದ್ದ.

ಅದು ಅವನಿಗೆ ಬೇರೊಬ್ಬರು ವಿಧಿಸಿದ ಶಿಕ್ಷೆಯಾಗಿರಲಿಲ್ಲ. ಅವಶ್ಯಕತೆ ಕಲ್ಪಿಸಿದ ಅವಕಾಶ-ದಾರಿದ್ರ್ಯದ, ದಿಕ್ಕುಗಾಣದ ಪರಿಸ್ಥಿತಿಯಲ್ಲಿ ಹಸಿವನ್ನು ಹಿಂಗಿಸಲು ಕಂಡ ದಾರಿ.

ಒಂದೊಂದು ಏಟಿಗೂ ಬೆನ್ನ ಮೇಲೆ ಬಿಳು-ಪಾದ ಪಟ್ಟೆ ಏರ್ಪಡುತ್ತಿತ್ತು; ಒಂದೊಂದು ಏಟಿಗೂ ವಿಚಿತ್ರವಾದ ಶಬ್ದ ಕೇಳಿಬರುತ್ತಿತ್ತು.

ಆ ಶಬ್ದದಲ್ಲಿ ಮನಸ್ಸುಳ್ಳ ಮನುಷ್ಯರಿಗೆ ಹಸಿವಿನ ಕೂಗು, ಅದು ವಿಧಿಸಿದ ಶಿಕ್ಷೆ ಭಯಂಕರವಾಗಿ ಕೇಳಿಸುತ್ತಿತ್ತು.

ಆದರೆ ಪರಶುರಾಮಯ್ಯನಿಗೆ ಮಾತ್ರ ಅದು ವಿನೋದ ಕೇಳಿಯಾಗಿತ್ತು. ಆ ಶಬ್ದ ಹುಲಿಯ ಪಂಜಾ ಏಟಿಗೆ ಸವಾಲಿನಂತಿತ್ತು.

ಪ್ರೇಕ್ಷಕರಲ್ಲಿ ಕೆಲವರು ವಿಚಿತ್ರ ದೃಶ್ಯವನ್ನು ಬಿಟ್ಟಗಣ್ಣುಗಳಿಂದ ನೋಡುತ್ತಿದ್ದರು. ಮತ್ತೆ ಕೆಲವರು 'ಅಯ್ಯೋ ಪಾಪ' ಅಂದುಕೊಳ್ಳುತ್ತಿದ್ದರು. ಮತ್ತೆ ಕೆಲವರು ಭೇಷ್, ಪಸಂದಾಗಿದೆ ಅಂದುಕೊಳತ್ತಿದ್ದರು. ಬಾಯಿ ಬಿಡುವ ಧೈರ್ಯ ಯಾರಿಗೂ ಇರಲಿಲ್ಲ.

ಶಬ್ದ.

ವಿಚಿತ್ರವಾದ ಶಬ್ದ!!

ಕಲ್ಲಿನಂತಹ ಹೃದಯವೂ ಕರಗಿ ನೀರಾಗುವಂತಹ ಶಬ್ದ, ಗುಡುಗು ಸಹ ಆಶ್ಚರ್ಯದಿಂದ ನಿಂತು ಕೇಳುವ ಶಬ್ದ!!!

ಒಂದು ಕಡೆಯಿಂದ ಕಂಜರಿಯ ಶಬ್ದ.

ಮತ್ತೊಂದು ಕಡೆಯಿಂದ ಚಾಟಿಯ ಸದ್ದು.

ಪರಶುರಾಮಯ್ಯ ಆ ಸದ್ದನ್ನು ತನ್ನ ಎದೆಯಲ್ಲಿ ಹುದುಗಿಸಿಕೊಳ್ಳುತ್ತಾ ಆನಂದಿಸುತ್ತಿದ್ದ.

ಕಾಲ ನಿಲ್ಲಲಿಲ್ಲ. ಆ ಶಬ್ದವೂ ನಿಲ್ಲಲಿಲ್ಲ. ಮೂಳೆ ಎದ್ದು ಕಾಣುತ್ತಿದ್ದ ಆ ಬೆನ್ನಿನ ಮೇಲೆ ಒಂದರ ಮೇಲೊಂದರಂತೆ ಚಾಟಿಯ ಬಿಳುಪಾದ ಗುರುತುಗಳು ಮೂಡುತ್ತಲೇ ಇದ್ದವು.

ಜನ ಉಸಿರಾಡುವುದನ್ನೂ ಮರೆತು ಆ ದೃಶ್ಯ

ಪರಶುರಾಮಯ್ಯ ಚುಟ್ಟಾ ಸೇದುತ್ತಾ, ಅದರ ಹೊಗೆಯನ್ನು ಬಾಯಿತುಂಬಾ ತುಂಬಿಕೊಳ್ಳುತ್ತಾ ತೃಪ್ತಿಯಿಂದ ನೋಡುತ್ತಿದ್ದ. ಸ್ವಲ್ಪ ಹೊತ್ತಾದ ನಂತರ ತನ್ನ ಪಕ್ಕದಲ್ಲಿಯೇ ಕೋಲೂರಿ ನಿಂತಿದ್ದ ಸತ್ತಿಯ ಕಡೆ ದೃಷ್ಟಿ ಬೀರಿದ.

ಸತ್ತಿ ಏನಪ್ಪಣೆ? ಎಂಬಂತೆ ಮತ್ತಷ್ಟು ಬಾಗಿ ನಿಂತು ತನ್ನ ದಣಿಯ ಕಡೆ ನೋಡಿದ.

ಪ್ರೆಸಿಡೆಂಟ ತನ್ನ ದೊಗಲೆ ಜೇಬಿನೊಳಗೆ ಕೈಹಾಕಿ ಬೆಂಕಿಪೊಟ್ಟಣ, ಚುಟ್ಟಾಕಟ್ಟು ಮತ್ತು ಇತರ ಕಾಗದಗಳ ಮಧ್ಯದಿಂದ ಒಂದು ರೂಪಾಯಿ ನೋಟನ್ನು ಹೊರಕ್ಕೆ ತೆಗೆದ. ಅದನ್ನು ಸತ್ತಿಗೆ ತೋರಿಸಿ ಏನೋ ಹೇಳಹೋಗುವಷ್ಟರಲ್ಲಿ ಗುಂಪಿನಲ್ಲಿ ಕಲಕಲವೆದ್ದಿತು. ಗುಂಪಿನ ಮಧ್ಯ ದಾರಿ ಮಾಡಿಕೊಳ್ಳುತ್ತಾ ಉಟ್ಟ ಪಂಚೆಯನ್ನು ಒಂದು ಕೈಯಲ್ಲಿ ಎತ್ತಿಹಿಡಿದು ಆ ಊರಿನ ಮತ್ತೊಬ್ಬ ದೊಡ್ಡ ಮನುಷ್ಯ ಪಾಸಕಾಲು ಬರುತ್ತಿದ್ದ.

"ಏನಯ್ಯಾ ಪ್ರೆಸಿಡೆಂಟೂ, ಬಾಳ ಇಸಿತ್ರ ಅನ್ನೋಹಂಗೆ ಈ ಕುಣಿತ ನೋಡ್ತಿದೀಯಾ!" ಎಂದ ಜಗುಲಿ ಹತ್ತುತ್ತಾ.

"ಸುಮ್ಕೆ ಕೆಲ್ಸ ಇಲ್ಲದ್ದಕ್ಕೆ ಇದೊಂದು ಹೊತ್ತು ಹೋಗ್ತದೇಂತ."

"ಪಸಂದಾಗದೆ ಬಡು. ಇದೆಲ್ಲಾ ಬರೀ ಮೋಸಾ ಕಣಯ್ಯಾ, ಆ ಏಟು ಅವಂಗೆ ತಗುಲಿದ್ರೆ ಬಡು ಕತ್ನಾಂತ; ಸುಮ್ಕೆ ಆಕಾಶ ಸದ್ದೋಗಾಂಗೆ ಸದ್ದು ಮಾಡ್ತಾನೆ ಅಷ್ಟೆ... ..."

"ಹೌದು. ಮತ್ತೆ ಇಲ್ದವೋದ್ರೆ ನಾವು ಕೊಡೊ ರೂಪಾಯಿ ಕಾಸ್ಗೆ ಅವ್ನ ಬೆನ್ನು ಮುರ್ಕೊಬೇಕೇನು? ಏನೋ ಹೊಟ್ಟೆಪಾಡ್ಗೆ ವೇಷ ಕಟ್ತಾರೆ."

"ಅಂ......ಅದೇ ಏಳೋಕ್ಬಂದೆ; ಇವ್ರೆಲ್ಲಾ ಒಂದೇ ತವಾ ನಮ್ಮೂರ ಮ್ಯಾಗೇ ಬಿದ್ದವ್ರೆ; ನಂ ಬೀದೀಲೂ ಒಬ್ಬ ಇಂಗೇ ಬಡಿದ್ಕೋತಾ ಅವ್ನೆ; ಜನ ಮಾತ್ರ ವುಚ್ಚರಂಗೆ ನೋಡ್ತಾ ಅವ್ರೆ ಕಾಸಿನ್ಮೇಲೆ ಕಾಸು ಎಸಿತಾ ಅವ್ರೆ ಅವನ ಜೋಳಿಗೆ ಒಳಾಕೆ... ...!"

"ಏನಂದಿ? ಇನ್ನೊಬ್ಬ ಕೂಡಾ ಅವ್ನೆನು

ಕರ್ರಿ ವೇಷ ಕಟ್ಟಿಸಿದ್ರೆ ಮಹಜನಾಗಿರ್ತಾರೆ: ಅಲ್ವೇ ಸಂಪ್ಯಾ" ಎಂದವನೇ ಸತ್ತಿಯನ್ನು ಕರೆದು, ಪೋಗೋ ಪಾಸಕಾಲು, "ಬೀದೀಲಿರೋನ್ನೊ ಕರ್ಕೊಂಬಾ" ಅಂತ ಆರ್ಡರ್ ಮಾಡಿದ.

ಸತ್ತಿ ಹೊರಟ.

ಬಾಗಿಲಲ್ಲಿ ಇನ್ನೂ ಅವನು ಬಡಿದುಕೊಳ್ಳು ತ್ತಲೇ ಇದ್ದ.

"ಲೋ ಸ್ವಲ್ಪ ನಿಲ್ಲೊ… ಇನ್ನೊಬ್ಬ ಬರ್ತಾನೆ. ಇಬ್ಬರೂ ಸೇರಿ ಹೊಡಕೊಳ್ಳೀವ್ರಂತೆ," ಎಂದು ಚೀಟ್ಯಾ ಹಚ್ಚಿದ ಪರಶುರಾಮಯ್ಯ.

ಚಾಟಿಯ ಶಬ್ದ ನಿಂತಿತು. ಕಂಜರಿಯ ಸದ್ದೂ ನಿಂತಿತು.

ಬಳಲಿದ ಚಾಟಿ ನೆಲವನ್ನಪ್ಪಿತು. ಕಂಜ—ರಿಯೂ ನೆಲದ ಮೇಲೆ ಮಲಗಿತು.

ಅವನು ಅಲ್ಲಿಯೇ ಅವನ ಪಕ್ಕದಲ್ಲಿ ಕುಳಿತ. ಅವಳು ತನ್ನ ಸೆರಗಿನಿಂದ ಅವನ ಮುಖವನ್ನು ಒರೆಸಿದಳು.

ಅವನು ಒಂದು ಸಲ ತನ್ನ ಮೂಕ ಹೆಂಡತಿಯ ಕಡೆಗೆ ನೋಡಿದ. ಅವಳ ಕಣ್ಣುಗಳಲ್ಲಿ ಪ್ರೀತಿ; ಆದರ "ತುಂಬಾ ಬಳಲಿದ್ದಿ" ಎಂಬ ಮೂಕ ರೋದನ ಕಾಣಿಸಿತು.

ಬಳಲಿದ ಅವನಿಗೆ ತಣ್ಣಗೆ ಬೀಸುತ್ತಿದ್ದ ಗಾಳಿ ಹಾಯೆನಿಸಿತ್ತು. ಹತ್ತಿರ ಇದ್ದ ಡಬ್ಬಾ ಎತ್ತಿ ಗಟಗಟನೆ ನೀರನ್ನು ಕುಡಿದನು.

"ಪ್ರೆಸಿಡೆಂಟ್ರೂ, ಅವ್ನು ತಾನು ಅನ್ನ ತಿನ್ನೋದು ಬಿಟ್ಟು ಎಲ್ಲಾ ಅವಳಿಗೇ ಇಕ್ತಾನಂತ ಕಾಣ್ತದೆ. ನೋಡೂ ಎಂಗದೆ ಅಕ್ಕಿ, ನೋಡಾಕೆ…"

"ಥೂತ್, ಎಂಥ ಮಾತಾಡ್ತೀ ಎಣ್ಣು ಅಂದ್ರೆ ನಿನ್ನ ಕಣ್ಗೆ ಅಂಗೆ ಕಾಣ್ತದೇನು? ಸ್ವಲ್ಪ ಲೆವೆಲ್ ನೋಡ್ಕೋ ಬೇಕಯ್ಯ ಲೆವಿಲೂ…"

"ಲೆವಿಲೆಂಥಾದ್ದೂ? ನಿನ್ನಂಗೆ ನೂರಾರು ರೂಪಾಯಿ ಖರ್ಚು ಮಾಡ್ಕಂಡಿ, ಅಲ್ದೆ ಸ್ನಾನಾನಾ ಮಾಡಾಕಿಲ್ಲ ನಾನು… ಇಂಥಾದೇ ನೀಟಾಗಿರ ತ್ತೈತೆ."

"ಇರ್ಲಿ ಬುಡು. ಅವನು ಬಂದಂಗೆ ಕಾಣ್ತೈತೆ," ಎಂದು ಸತ್ತಿಯ ಹಿಂದೆ ಬರುತ್ತಿದ್ದವನನ್ನು ತೋರಿಸಿದ.

ಸತ್ತಿ ಬಂದು ಪರಶುರಾಮಯ್ಯರ ಬಳಿ ನಿಂತು "ಇವ್ನೇ ಅಲ್ಲಿ ಆಡ್ತಾ ಇದ್ದೋನು" ಎಂದ. ಪರಶುರಾಮಯ್ಯ ಅವನ ಕಡೆ ಪರಿಶೀಲಿಸು ವಂತೆ ನೋಡಿದ.

ಎತ್ತರವಾಗಿ, ಬಲಿಷ್ಠವಾಗಿದ್ದ ಅವನು. ತಲೆ ತುಂಬಾ ಒತ್ತಾದ ಕೂದಲು ಗುಂಗುರು ಗುಂಗು ರಾಗಿತ್ತು. ವ್ಯಾಯಾಮ ಕಸರತ್ತು ಮಾಡಿದಂತಿತ್ತು. ಒಳ್ಳೇ ರೌಡಿಯಂತೆ ಕಾಣುತ್ತಿದ್ದ.

ಪರಶುರಾಮಯ್ಯ ಅವನನ್ನು ತೃಪ್ತಿಯಿಂದ ದಿಟ್ಟಿಸಿದ.

"ಏನ್ಸಾಮಿ, ಕರ್ಕಂಬಾ ಅಂದ್ರಂತೆ?"

"ಏನಿಲ್ಲ ಕಣೋ, ನೀವಿಬ್ರೂ ಬಿಡಿ ಬಿಡಿಯಾಗಿ ಬಡಿದುಕೊಂಡು ಎಷ್ಟು ಸಂಪಾದಿಸ್ತೀರ? ನಾನು ನಿಮ್ಮಿಬ್ಬರಿಗೂ ಪಂದ್ಯ ಇಡತೀನಿ. ಅಂಗೆ ಮಾಡ್ತೀರಾ?"

"ಎಂಗೆ ಸ್ವಾಮಿ?"

ಎಲ್ಲರೂ ಉತ್ಸಾಹದಿಂದ ಪರಶುರಾಮಯ್ಯನ ಕಡೆ ನೋಡುತ್ತಿದ್ದರು.

"ನಿಮ್ಮಿಬ್ರ ಹತ್ರಾನೂ ಚಾಟಿಗಳು ಅವೆ ಯಲ್ಲಾ, ಅದ್ರಲ್ಲಿ ನಿಮ್ಮನ್ನ ನೀವು ಬಡು ಕೊಳ್ಳೋಕಿಂತ ಒಬ್ಬರನ್ನೊಬ್ರು ಹೊಡೀರಿ. ಯಾರು ಕೆಳಗೆ ಬಿದ್ರೆ ಅವರು ಸೋತಂಗೆ. ಗೆದ್ದೋರಿಗೆ ಈ ಇಪ್ಪತ್ತು ರೂಪಾಯಿ ನೋಟು ಕೊಡ್ತೀನಿ," ಹೆಮ್ಮೆಯಿಂದ ಕೈಯಲ್ಲಿದ್ದ ಇಪ್ಪತ್ತು ರೂಪಾಯಿ ನೋಟನ್ನು ಅಲ್ಲಾಡಿಸಿ ತೋರಿಸಿದ ಪರಶುರಾಮಯ್ಯ.

"ತಮ್ಮ ಚಿತ್ತ ಅಂಗೇ ಆಗಲೀ ಸಾಮಿ," ಅಂದ. ರೌಡಿಯಂತಿದ್ದವ.

"ಏನೋ ನೀನೇನಂತೀ… ಕುಳಿತಿದ್ದವನನ್ನು ದ್ದೇಶಿಸಿ ಕೇಳಿದ ಪಾಸಕಾಲು.

ಅವನು ಮೆಲ್ಲನೆ ಮೇಲೆದ್ದು "ತಮ್ಮ ದಯೆ ಅಂಗೇ ಆಗ್ಲಿ ಸ್ವಾಮಿ…" ಅಂದ

ಅವನ ಹೆಂಡತಿ ತಟ್ಟನೇ ಮೇಲೆದ್ದು, ಅವನಿಗೆ, ಅಡ್ಡ ನಿಂತಳು. ಬೇಡ ಬೇಡ ಅನ್ನುವಂತೆ ತಲೆಯನ್ನು, ಕೈಗಳನ್ನು ಅಡ್ಡವಾಗಿ ಆಡಿಸಿದಳು.

"ರತ್ತೀ, ಪರವಾಗಿಲ್ಲಕಣೇ. ನಾವ್ಗೆದ್ರೆ ಇಪ್ಪತ್ರೂಪಾಯಿ ಬರ್ತದೆ. ಒಂದಾ ರ ಆಯಾಗಿ

ಬದುಕ್ಸಿದು," ಅವಳ ಭುಜ ತಟ್ಟಿ ಧೈರ್ಯ ಹೇಳಿದ ಅವನು. ಅವಳ ಮುಖದಲ್ಲಿನ ಭಯದ ಛಾಯೆ ಬದಲಾಗಲಿಲ್ಲ. ಏನು ನಡೆಯಲಿದೆಯೋ ಏನೋ ಎಂಬಂತೆ ನೋಡತೊಡಗಿದಳು.

ರೌಡಿಯಂತಿದ್ದವನು ಹೆಮ್ಮೆಯಿಂದ ಇವನ ಕಡೆ ನೋಡಿದ. ಸಣಕಲ ನನ್ಮಗ, ಇವನೇನು ಗೆಲ್ತಾನೆ ನನ್ನ? ಎಂಬಂತೆ.

"ಇಪ್ಪತ್ರೂಪಾಯಿ ಹೋದರೂ ಪರ್ವಾಗಿಲ್ಲ. ಒಳ್ಳೇ ಏರ್ಪಾಟು ಮಾಡಿದೆ ಪ್ರೆಸಿಡೆಂಟೂ." ಎಂದು ಮೆಚ್ಚಿಕೊಂಡ ಪಾನಕಾಲು.

"ಆಂ... ಈ ಪರಶುರಾಮಯ್ಯ ಅಂದ್ರೆ ಏನಂದ್ಕೊಂಡ್ರೋ? ಹುಲಿ ಬಿದ್ರೆ ನಂದು. ಈಗ ನೋಡು. ಘೋರಾ ಘೋರಿ ನಡೀತೈತೆ ಯುದ್ಧ..."

ದಪ್ಪಗೆ ಸುರುಳಿ ಸುತ್ತಿದ ಚಾಟಿಗಳು ಒಂದೇ ಸಲ ಮೇಲಕ್ಕೆದ್ದವು.

ಅವರಿಬ್ಬರ ಕಣ್ಣಲ್ಲಿಯೂ ಆ ಇಪ್ಪತ್ತು ರೂಪಾಯಿಗಳನ್ನು ತಾವೇ ಗೆಲ್ಲಬೇಕೆಂಬ ಆಸೆಯ ತೀವ್ರತೆ. ಎದುರಾಳಿಯನ್ನು ಉರುಳಿಸುವ ನಿಶ್ಚಯ ಕಾಣುತ್ತಿತ್ತು.

"ಏನಯ್ಯಾ ಪಾನಕಾಲು. ನೀನೂ ಪಂದ್ಯ ಕಟ್ಟೀಯಾ ಆ ದಪ್ಪಗಿರೋನು ಗೆಲ್ತಾನೇಂತ. ನಂದು ನೂರು ರೂಪಾಯಿ ಪಂದ್ಯ..."

"ಅಪ್ಪಪ್ಪಾ...... ನಿನ್ನ ಬುದ್ಧಿ ಮಟ್ಟ ಆಯ್ತು ಕಣಪ್ಪಾ ಪ್ರೆಸಿಡೆಂಟೂ. ದಪ್ಪಗಿರೋನ ಮ್ಯಾಗೇ ಪಂದ್ಯ ಕಟ್ಟಿದೀ... ಗೆಲ್ಲೋಕೆ ಬೇಕಾದ್ದು ಕೈಚಳಕ, ಚಾಟಿ ತಿರುಗಿಸ್ಸೋ ಚುರುಕ್ತನಾ ಅಷ್ಟೇ ಆಗ್ಲಿ, ಮೈ ಭಾರಿ ಇದ್ರೆ ಪರ್ಯೋಜ್ನ ಇಲ್ಲ. ಇವ್ನ ಬಡಕಲಾಗಿದ್ರೂ ಚಾಟಿ ಸಂದಾಗಿ ತಿರುಗಿಸ್ತಾನೆ. ಇವ್ನಿಗೆ ಎಂಡ್ತಿ ಅವ್ಳೆ. ಇಪ್ಪತ್ತು ರೂಪಾಯಿ ದಕ್ಕಿಸ್ಕೋಬೇಕಂತ ಆಟ ಎಚ್ಚಾಗಿ ಇಜೃಂಭಿಸ್ತಾನೆ. ನನ್ನ ಪಂದ್ಯ ಅವನ ಮ್ಯಾಗ ನೂರು ರೂಪಾಯಿ..."

"ಸರಿ ಬಿಡು. ಹತ್ತು ನಿಮಿಷಗಳಲ್ಲಿ ಗೊತ್ತಾಗ್ತದೆ," ಎಂದಂದು 'ಲೋ' ನೀವೂ ಪಂದ್ಯ ಕಾದುಕೊಳ್ರೋ," ಎಂದು ಕೂಗಿದ ಪರಶುರಾಮಯ್ಯ.

ನೆರೆದ ಜನರಲ್ಲಿ ಗುಜುಗುಜು ಮೊದಲಾಗಿ ಅವರೂ ಪಂದ್ಯ ಕಟ್ಟುವುದೂ ಮೊದಲು ಮಾಡಿದರು.

ಹತ್ತು ನಿಮಿಷದಲ್ಲಿ ಎಲ್ಲರೂ ಪಂದ್ಯ ಕಟ್ಟಿದ್ದೂ ಆಯಿತು.

ಮೂಕಿಯ ಎದೆ ಗಡಗಡನೆ ನಡುಗುತ್ತಿತ್ತು. ಅವಳಿಗೆ ಬಾಯಿ ಇದ್ದಿದ್ದರೆ ಏನೇನು ಅನ್ನುತ್ತಿದ್ದಳೋ, ಹೇಗೆ ಕೂಗಾಡುತ್ತಿದ್ದಳೋ, ಗಂಡನನ್ನು ಈ ಯುದ್ಧಕ್ಕೆ ಇಳಿಯಬೇಡಾಂತ ಎಷ್ಟು ವಿಧವಾಗಿ ಪ್ರಾರ್ಥಿಸುತ್ತಿದ್ದಳೋ!

ಮೇಲಕ್ಕೆದ್ದ ಚಾಟಿಗಳು ಒಂದು ಸಲ ಗಾಳಿಯಲ್ಲಿ ಸುತ್ತಿದವು.

ಪರಶುರಾಮನ ಕೈಯಲ್ಲಿ ಕಾಣುತ್ತಿದ್ದ ಆ ಕಂಪನಿಯ ಇಪ್ಪತ್ತು ರೂಪಾಯಿನ ನೋಟಿಗೋಸ್ಕರ ಎರಡು ಚಾಟಿಗಳು ಯುದ್ಧ ಪ್ರಾರಂಭಿಸಿದ್ದವು.

ಆ ಚಾಟಿಗಳು ಅವರಿಬ್ಬರ ಬೆನ್ನ ಮೇಲೆ ತೋಳುಗಳ ಮೇಲೆ, ಮುಖದ ಮೇಲೆ ಭರತ ನಾಟ್ಯ ಮಾಡತೊಡಗಿದವು. ಹುಲಿ ಗರ್ಜಿಸಿದಂತೆ, ಸಿಡಿಲೆರಗಿದಂತೆ, ವಿಚಿತ್ರವಾದ ಶಬ್ದಗಳು ಹೊರಹೊಮ್ಮುತ್ತಿದ್ದವು.

ಸರ್...... ಸರ್...ಪಟ್...ಪಟ್... ಸರ್ರ್‌ರ್‌ರ್... ಸಣಕಲ ಶರೀರದವನ ಕೈ ಒಳ್ಳೇ ನೈಪುಣ್ಯದಿಂದ ತಿರುಗುತ್ತಿತ್ತು. ಅವನ ವೇಗಕ್ಕೆ ಪ್ರತಿಸ್ಪರ್ಧಿ ಹಿಮ್ಮೆಟ್ಟಲಾರಂಭಿಸಿದ.

ಮೂಕಿ ಆವೇಶದಿಂದ ಕಂಜರಿ ಬಾರಿಸುತ್ತಿದ್ದಳು.

ಅವನು ಮತ್ತಷ್ಟು ಜೋರಾಗಿ ಚಾಟಿ ತಿರುವುತ್ತಿದ್ದ.

ಕಾಲ ಆಶ್ಚರ್ಯದಿಂದ ಇದನ್ನು ಕಿಲಕಿಸುತ್ತಾ ಸಾಗುತ್ತಿತ್ತು.

ಬರಬರುತ್ತಾ ಕಂಜರಿಯ ಶಬ್ದ ಕ್ಷೀಣವಾಗತೊಡಗಿತು. ಅಪಸವ್ಯವಾಗಿ ಮೊಳಗತೊಡಗಿತು. ಅವನು ಬಳಲಿಕೆಯಿಂದ ಸುಸ್ತಾಗತೊಡಗಿದ. ಚಾಟಿಯನ್ನು ತಿರುಗಿಸುತ್ತಿದ್ದ ಕೈ ಉರಿಯಲಾ—ರಂಭಿಸಿತು.

ರೌಡಿಯಂತಿದ್ದವನಿಗೆ ಅವಕಾಶ ಬಂತೀಗ. ಅವನ ಚಾಟಿ ಬಡಕಲ ಶರೀರದವನ ಕಾಲು ಗಳನ್ನು ಸುತ್ತಿಕೊಂಡಿತು. ಸುತ್ತಿಕೊಂಡ ಚಾಟಿ ಯನ್ನು ಜೋರಾಗಿ ಹಿಡಿದೆಳೆದ.

ಆಯಿತು! ಅದುವರೆವಿಗೂ ಆವೇಶದಿಂದ ಹೋರಾಡಿದ ಸಣಕಲ ಸುಸ್ತಾಗಿ ಬಿದ್ದ. ಅವನ ಸ್ಥಾನದಲ್ಲಿ ರೌಡಿ ನಿಂತಿದ್ದ ಈಗ.

'ಸರ್... ಸರ್, ಫಟ್... ಫಟ್... ಸರ್. ರ್‌ರ್‌ರ್...'

ಮೂಕಿ ಭಯಭ್ರಾಂತಳಾಗಿ ನೋಡುತ್ತಿದ್ದಳು. ಅವಳ ಬಿಸಿ ಕಣ್ಣೀರಿನ ಹನಿ ದಳ ದಳನೆ ಅವಳ ಕೆನ್ನೆಯ ಮೇಲೆ ಹರಿದು ಬರುತ್ತಿತ್ತು.

ಪರುಶರಾಮು ಹರ್ಷಾತಿರೇಕದಿಂದ ಕೂಗ ತೊಡಗಿದ. ಪಾಸಕಾಲು ಪಂದ್ಯ ಕಳೆದುಕೊಳ್ಳುತ್ತಿನೇನೋ ಎಂದು ಚಿಂತಾಕ್ರಾಂತನಾದ.

ದೊಡ್ಡವರೇ ಕೂಗಲು ಶುರು ಮಾಡಿದ ಮೇಲೆ ನೆರೆದ ಜನರು ಸಹ ಕೇಕೆ ಹಾಕಿ ಕೂಗಲು ಪ್ರಾರಂಭಿಸಿದರು.

ರೌಡಿಯಂತಿದ್ದವನ ಮೇಲೆ ಪಂದ್ಯ ಕಟ್ಟಿದ ಜನ ಕುಣಿದಾಡತೊಡಗಿದರು. ಅವನು ಗೆದ್ದರೆ ಅವರಿಗೂ ಲಾಭ. ಸ್ವಲ್ಪವೂ ಕಷ್ಟಪಡದೇ ಲಾಭ ಪಡೆಯಬಹುದು.

ಆ ಕೂಗಾಟ, ಕೇಕೆಗಳಿಂದ ಅವನು ಮತ್ತಷ್ಟು ರೊಚ್ಚಿಗೆದ್ದ.

ಚಾಟಿ ವಿಜೃಂಭಿಸಿತು.

ಪರಶುರಾಮಯ್ಯನ ಕೈಯಲ್ಲಿನ ಇಪ್ಪತ್ತು ರೂಪಾಯಿಯ ನೋಟು ಗಾಳಿಗೆ ಅಲ್ಲಾಡುತ್ತಿತ್ತು.

ಬಡಕಲ ಶರೀರದ ತುಂಬೆಲ್ಲಾ ರಕ್ತ...... ಮೂಕಿಯ ಎದೆಯಲ್ಲಿ ನಡುಕ...... ಪಡಿಯನ ಮನದಲ್ಲಿ ಹಮ್ಮು ಆಸೆ...... ಕೆಂಪು ಬಣ್ಣದ ಇಪ್ಪತ್ತು ರೂಪಾಯಿಗಾಗಿ ಆತುರ.

ವಿಜೃಂಭಿಸುತ್ತಿದ್ದ ಚಾಟಿಯು [illegible] ಒಮ್ಮೆಲೇ ನಿಂತುಹೋಯಿತು. ಬಡಕಲ ಶರೀರ ಅಲುಗಾಡದೇ ಬಿದ್ದಿತ್ತು. ಮೂಕಿ ಓಡಿ ಹೋಗಿ ಅವನ ಮೇಲೆ ಬಿದ್ದಳು. ಹೊರಗೆ ಬಾರದ ಕಂಠದಲ್ಲಿನ ದುಃಖ, ಕೇಳಿಸದ ಭಾಷೆಯಲ್ಲಿನ ವೇದನೆ ಉಮ್ಮಳಿಸಿತು.

ಸಣಕಲವ ಸೋತಂತೆ ತೀರ್ಮಾನವಾಯಿತು.

ಪಂದ್ಯ ಗೆದ್ದವರು ಉತ್ಸಾಹದಿಂದ ಕುಣಿದಾಡ ತೊಡಗಿದರು. ಸೋತವರ ಮುಖ ಬಾಡಿತು. ಕೆಳಗೆ ಬಿದ್ದ ಬಡಕಲನನ್ನು ಬೈದುಕೊಂಡರು.

"ಆಯಿತಲ್ರೋ... ಇನ್ನು ಓಗಿ."

ಜನ ನಿಧಾನವಾಗಿ ಚದುರತೊಡಗಿದರು.

ಗೆದ್ದವ ಕೈಯಲ್ಲಿ ಚಾಟಿ ಹಿಡಿದು ಉಬ್ಬಿದೆ-ದೆಯಿಂದ ಹೆಮ್ಮೆಯಿಂದ ಬೀಗುತ್ತ ಪರಶುರಾಮಯ್ಯನ ಬಳಿಗೆ ಬಂದ.

"ಭೇಷ್... ಪಸಂದಾಗಿ ತಿರುಗಿಸ್ದೆ ಕಣೋ ಚಾಟೀನ. ತಗೋ ನಿನ್ನ ಇಪ್ಪತ್ತು ರೂಪಾಯಿ." ಎಂದು ಮೆಚ್ಚುಗೆಯಿಂದ ಇಪ್ಪತ್ತು ರೂಪಾಯಿಯ ನೋಟನ್ನು ಅವನ ಕೈಯಲ್ಲಿಟ್ಟ.

"ಹೋಗು ಇನ್ನ," ಎಂದ ಪಾಸಕಾಲು ಕೋಪ ದಿಂದ.

ಅವನು ಹಿಂದಿರುಗಿದ.

"ಕೊಡಯ್ಯ ನೂರು ರೂಪಾಯಿ" ಎಂದ ಪರಶುರಾಮಯ್ಯ.

"ಕೊಡದಿದ್ರೆ ಆಗ್ತದಾ ಅಂದುಕೊಂಡ ತಪ್ಪಿಗೆ"

ಹೆಮ್ಮೆಯಿಂದ ಬೀಗುತ್ತ ವಿಕಟಾಟ್ಟಹಾಸ ಮಾಡಿದ ಪರಶುರಾಮಯ್ಯ. ಹಿಂದಿರುಗುತ್ತಿದ್ದ ರೌಡಿಗೆ ಇವರ ಮಾತು ಕೇಳಿಸುತ್ತಿತ್ತು.

"ಲೋ......" ಪರಶುರಾಮಯ್ಯ ಗಟ್ಟಿಯಾಗಿ ಕೂಗಿದ.

ರೌಡಿ ನಿಂತಲ್ಲಿಯೇ ನಿಂತು ತಲೆ ತಿರುಗಿಸಿ ನೋಡಿದ.

ದೂರದಲ್ಲಿ ಪರಶುರಾಮಯ್ಯ, ಅವನ ಪಕ್ಕದಲ್ಲಿಯೇ ಪಾಸಕಾಲು, ಪರಶುರಾಮನ ಮುಖದಲ್ಲಿ ಒಂದು ವಿಧವಾದ ನಗೆ. 'ಬೆಕ್ಕಿಗೆ ಚೆಲ್ಲಾಟ, ಇಲಿಗೆ ಪ್ರಾಣ ಸಂಕಟ' ಗಾದೆಯನ್ನು ನೆನಪಿಗೆ ತರುವ ನಗೆ ಅದು.

ಅವನಿಗೆದುರಾಗಿ ಸ್ವಲ್ಪ ದೂರದಲ್ಲಿ ಆ ಬಡಕಲ ಜೀವಿ… ಅವನ ಪಕ್ಕದಲ್ಲಿಯೇ ಮೂಕಿ. ಹೃದಯ ವಿದಾರಕವಾದ ಅವಳ ಅಳು… ಎಂತಹ ಕಠಿಣ ಹೃದಯವಾದರೂ ಕರಗುವಂತಿದ್ದ ಅವಳ ಮೂಕ ರೋದನ.

ಹೆಪ್ಪುಗಟ್ಟಿದ ಅವನ ಎದೆಯಲ್ಲಿ ಬಿರುಕು–ಬಿಟ್ಟಂತಾಯಿತು.

"ಲೋ, ಅವ್ರಿಬ್ರನ್ನೂ ಕರ್‍ಕೊಂಡೋಗು, ಅವ್ರೂ ನಿಮ್ಮಂಥೋರೇ ಅಲ್ವಾ…" ಪರಶುರಾಮಯ್ಯನ ಕಂಠದಿಂದ ಕೇಳಿಸಿತು.

ಆ ಮಾತು ಅವನ ಕಲ್ಲೆದೆಯನ್ನು ಸೀಳಿತು. ತಲೆಯಲ್ಲಿ ಏನೋ ಮಿಂಚಿದಂತಾಯಿತು.

"ಎಂಥವರು? ಏನಂದ ಅವ? ಆ ಮಾತಿಗೆ ಅರ್ಥ ಏನು? ಈ ಮನುಷ್ಯರ ಮನಸ್ಸಿನೊಳಗಿನ ಎಂಥಾ ಬುದ್ಧಿ? ನನ್ನವರು… ನನ್ನಂಥವರು… ಹೌದು ನನ್ನಂಥೋರೇ…"

ಆ ಕಲ್ಲೆದೆಯಲ್ಲಿ ಏನೇನೋ ಭಾವನೆ ಸ್ಫುರಿಸಿತು.

ಸರ್ರನೇ ಹಿಂದಿರುಗಿದ.

ಆಶ್ಚರ್ಯದಿಂದ ತನ್ನನ್ನೇ ನೋಡುತ್ತಿದ್ದ, ದೊಡ್ಡ ಮನುಷ್ಯರ ಬಳಿಗೆ ಬಂದ.

ಒಂದು ಬಾರಿ ಅವರಿಬ್ಬರನ್ನೂ ದಿಟ್ಟಿಸಿ ನೋಡಿದ. ಸೊಂಟದ ಬಳಿ ಪಂಚೆಗೆ ಸಿಗಿಸಿಕೊಂಡಿದ್ದ ಇಪ್ಪತ್ತು ರೂಪಾಯಿನ ನೋಟನ್ನು ಹೊರಕ್ಕೆ ತೆಗೆದ. ಅದರ ಕಡೆಗೊಮ್ಮೆ ಅವರ ಕಡೆಗೊಮ್ಮೆ ತನ್ನ ಕೆಂಪುಗಣ್ಣಿನಿಂದ ಕೆಕ್ಕರಿಸಿ ನೋಡುತ್ತಾ ಅದನ್ನು ಅವರ ಕಾಲ ಬಳಿ ಬೀಳುವಂತೆ ಬೀಸಿ ಒಗೆದ.

ಈ ಹಠಾತ್ಪರಿಣಾಮದಿಂದ ದಂಗುಬಡಿದಂ–ತಾಯಿತು ಆ ದೊಡ್ಡ ಮನುಷ್ಯರಿಗೆ.

ಅವನು ಹಿಂದಿರುಗಿ ಮೂಕಿಯ ಬಳಿ ಬಂದ,

"ಏಳು ತಂಗೆಮ್ಮಾ…" ಎಂದು ಭುಜ ಹಿಡಿದು ಆದರದಿಂದ ಎಬ್ಬಿಸಿದ. ಕೆಳಗೆ ಬಿದ್ದ ಬಡಕಲ ಶರೀರವನ್ನು ಎತ್ತಿ ಭುಜದ ಮೇಲೆ ಹಾಕಿಕೊಂಡು ಸರಸರನೇ ಮುಂದಕ್ಕೆ ನಡೆದ.

ಮೂಕಿ ಸಂತೋಷ, ಕೃತಜ್ಞತೆಗಳಿಂದ ಮನ–ಸ್ಸಿನಲ್ಲೇ ಅವನಿಗೆ ಕೈ ಮುಗಿಯುತ್ತಾ ನಿಧಾನವಾಗಿ ಅವನ ಹಿಂದೆ ಹೆಜ್ಜೆ ಹಾಕಿದಳು. ✪



"ನನ್ನನ್ನು ಬಿಟ್ಟುಹೋಗಬೇಡ. ಏಕೆಂದರೆ ಎಲ್ಲಾ ಅತೀತ ನನ್ನಲ್ಲಿಯೇ ಇದೆ," ಎಂದಿತು ನನ್ನ ಮನೆ. ಕೂಡಲೇ, "ಉಹುಂ ಹಾಗೆ ಮಾಡಬೇಡ. ಬದಲು ನನ್ನ ಹಿಂದೆಯೆ ನಡೆ. ಏಕೆಂದರೆ ನಾನೇ ನಿನ್ನ ಭವಿಷ್ಯ," ಮಾರ್ನುಡಿಯಿತು ನನ್ನ ಮಾರ್ಗ. ನಾನು ಅವೆರಡಕ್ಕೂ ಹೇಳಿದೆ: "ನನಗೆ ಅತೀತವೂ ಇಲ್ಲ, ಭವಿಷ್ಯವೂ ಇಲ್ಲ. ನಾನು ಒಂದೆಡೆ ಉಳಿದರೆ ಉಳಿದುಕೊಂಡಿದ್ದನ್ನೇ ನಡೆಯುವುದೆಂದು ತಿಳಿ. ಒಂದು ವೇಳೆ ನಡೆಯಲಾರಂಭಿಸಿದರೆ ಅದೇ ನಿಲ್ಲುವುದೆಂದು ತಿಳಿದುಕೋ. ಮೃತ್ಯು-ಪ್ರೇಮಗಳ ಶಕ್ತಿಯೇ ಅಂಥಾದ್ದು-ಜಗತ್ತಿನ ಯಾವ ವಸ್ತುವನ್ನಾದರೂ ಒಡನೆಯೆ ಬದಲಿಸಿಬಿಡುವಂಥಾದ್ದು."

# ಗಿಡಮೂಲಿಕೆಗಳೆಡೆಯಲ್ಲಿ



ಬಿ. ಎಸ್. ರಾಮಭಟ್ಟ

ನಾನು ನನ್ನ ಚಿಕ್ಕಪ್ಪನ ಮನೆಗೆ ಹೋದುದು ಅದೇ ಮೊದಲ ಬಾರಿ. ಆದರೆ ಅವರ ಮನೆ ಇರುವುದು ಮಲೆನಾಡಿನ ಮಡಿಲಲ್ಲಿ. ಅಂದಮೇಲೆ ಅಲ್ಲಿಯ ಪ್ರಕೃತಿಯ ಸೊಬಗನ್ನು ಹೆಚ್ಚು ವರ್ಣಿಸಬೇಕಾಗಿಲ್ಲ. ಒಂದೆಡೆ ಬೆಟ್ಟಗಳ ಸಾಲು. ಅವರ ಮನೆಯಂಗಳದಿಂದ ಕೆಳಗೆ ಇಳಿದುಹೋದರೆ ಅಡಿಕೆಯ ತೋಟ. ಮನೆಯ ಹಿಂಭಾಗದಿಂದ ಕಾಲುವೆಯಲ್ಲಿ ನೀರು ತಾನಾಗಿಯೇ ಹರಿದು ಬಂದು ತಗ್ಗಿನಲ್ಲಿ ಧುಮುಕುತ್ತದೆ — ಒಂದು ಪುಟ್ಟ ಜಲಪಾತದಂತೆ. ನಾನು ಹೋದ ಎರಡು ದಿನಗಳು ಉಪಚಾರದಲ್ಲೇ ಕಳೆದವು. ತಿನ್ನಲು ಬೇಕಾದಷ್ಟು ಹಣ್ಣು, ಕುಡಿಯಲು ರುಚಿಯ ಕಷಾಯ. ಉಪ್ಪಿನಕಾಯಿ, ಹಲಸಿನ ಹಪ್ಪಳವಂತೂ ಬಲು ರುಚಿ. ಆಗ ಅಲ್ಲಿ ಹುಲಿ, ಮುಳ್ಳು ಹಂದಿ, ಕಾಡುಕೋಣಗಳ ಕಾಟವಂತೂ ಹೇಳತೀರದು. ಇದೊಂದು ಬಿಟ್ಟರೆ ಅಲ್ಲಿ ಬೇಸರ ಪಡುವುದೇ ಇಲ್ಲ. ಚಿಕ್ಕಪ್ಪ ಒಳ್ಳೆಯ ಬೇಸಾಯಗಾರರೂ ಹೌದು, ಬೇಟೆಗಾರರೂ ಹೌದು. ರಾತ್ರಿ ಹೊತ್ತು ಈ ಜೀವಿಗಳ ಕಾಟಕ್ಕೆ ಹುಸಿ ಗುಂಡು ಹಾರಿಸುವುದೂ ಉಂಟು.

ಅವರ ಮನೆಯ ಎದುರಿನ ಬೆಟ್ಟವು ನನ್ನ ಮನಸ್ಸನ್ನು ಸೆಳೆದಿತ್ತು. ಅದರ ಮೇಲೊಂದು ಪುಟ್ಟ ಕೋಟೆ. ವಸಂತಋತುವಿನ ಆ ಸಂಜೆಯಲ್ಲಿ ಬೆಟ್ಟದ ಮೇಲೆ ಮೋಡಗಳು ಸರಿದಾಗ ಬೆಟ್ಟಕ್ಕೆ ಮುತ್ತಿಡುವಂತೆ ಕಾಣಿಸುತ್ತಿದ್ದವು. ನಯನಮನೋಹರವಾಗಿದ್ದ ಆ ಬೆಟ್ಟವನ್ನು ಹತ್ತಬೇಕೆಂದು ನನಗೆ ಮನಸ್ಸಾಯಿತು. ಚಿಕ್ಕಪ್ಪನನ್ನು ಕೇಳಿದೆ. ಅವರು ಕೂಡಲೆ ಒಪ್ಪಿಕೊಂಡರು.

ಚಿಕ್ಕಪ್ಪ ತಲೆಗೆ ಹಾಳೆಯ ಟೋಪಿಯನ್ನು ಹಾಕಿಕೊಂಡರು. ಸೊಂಟಕ್ಕೆ ದಪ್ಪನೆಯ ದಾರವನ್ನು ಸುತ್ತಿ ಹಿಂಭಾಗದಲ್ಲಿ ನೇಲುವ ಕಬ್ಬಿಣದ ಗೊಣಸಿಗೆ ಕತ್ತಿಯನ್ನು ಸಿಕ್ಕಿಸಿದರು. ಹೆಗಲಿಗೆ ಕರಿಯ ಕಂಬಳಿಯನ್ನು ಏರಿಸಿಕೊಂಡರು. ಬಂದೂಕು ತೆಗೆದುಕೊಳ್ಳಲೂ ಮರೆಯಲಿಲ್ಲ.

ಮನೆಯ ಮುಂಭಾಗದ ತೋಟವನ್ನು ದಾಟಿದೆವು. ಅಲ್ಲಿಂದಲೇ ಕಾಡಿನ ಸೆರಗು ಆರಂಭವಾಗಿತ್ತು. ದಾರಿಯಲ್ಲಿ ಚಿಕ್ಕಪ್ಪ ಹುಲಿ, ಕಾಡುಕೋಣಗಳ ಕತೆಯನ್ನು ಹೇಳುತ್ತಿದ್ದರು. ಬೆಟ್ಟದ ಕಿಬ್ಬಿಯಲ್ಲಿ ಹಿಂಡುಹಿಂಡಾಗಿ ಮೇಯುತ್ತಿರುವ ಕಾಡುಕೋಣಗಳನ್ನು ತೋರಿಸಿದರು. ನಾನು ಅವರನ್ನು ಹಿಂಬಾಲಿಸುತ್ತಾ ಕತೆಯನ್ನು ಕೇಳುತ್ತಿದ್ದೆ.

ಚಿಕ್ಕಪ್ಪ ಇದ್ದಕ್ಕಿದ್ದಂತೆ ನಿಂತುಕೊಂಡರು. "ಅಲ್ಲಿ ನೋಡು. ಬೇಗ ಬಾ" ಎಂದು ಕರೆದು ತೋರಿಸಿದರು.

ನಮ್ಮ ಎಡ ಭಾಗದಲ್ಲಿ ಒಂದು ಪ್ರಪಾತ. ಅದರ ಇನ್ನೊಂದು ಅಂಚಿನಲ್ಲಿ ಅಗಲವಾದ ಬಂಡೆ. ಅದರ ಮೇಲೆ ಒಂದು ಹುಲಿ ತನ್ನ ಎರಡು ಮರಿಗಳೊಡನೆ ಚಿನ್ನಾಟವಾಡುತ್ತಿದೆ. ಹೊಂಬಿಸಿಲು ಅದರ ಮೈಮೇಲೆ ಬಿದ್ದು ಮೈ ಬಂಗಾರದಂತೆ ಹೊಳೆಯುತ್ತಿದೆ. ಅದನ್ನು ನೋಡಿದಾಗ ನನ್ನ ಮೈ ಜುಂ ಎಂದಿತು. ಸದ್ಯಕ್ಕೆ ನಮಗೆ ಯಾವ ಅಪಾಯವೂ ಆಗುವಂತಿರಲಿಲ್ಲ. ಕಾರಣ ಹುಲಿ ಪ್ರಪಾತದ ಆಚೆಗೆ ಇತ್ತು. ಒಂದು ರೀತಿಯ ಭಯವಾದರೂ ಮರಿಗಳನ್ನು ಮುದ್ದಾಡುವ ಆ ಹುಲಿಯನ್ನೇ ನೋಡುತ್ತಾ ನಿಂತಿದ್ದೆ.

"ಏನು ? ಕರಿಯಣ್ಣನ ಸವಾರಿ! ಒಬ್ಬನೇ ಹೊರಟಿದೆ. ಯಾವಕಡೆಗೋ..." ಎಂದು ಕೇಳಿಸಿದಾಗಲೇ ನನಗೆ ಎಚ್ಚರ. ತುಂಡು ಪಂಚೆ ಸುತ್ತಿ ಮೇಲೆ ಕರಿಯ ಕಂಬಳಿ ಹಾಕಿಕೊಂಡ ಆ ವ್ಯಕ್ತಿ ಹೆಸರಿಗೆ ತಕ್ಕಂತೆ ಇದ್ದಿಲಿನಂತೆಯೇ ಕಾಣಿಸುತ್ತಿದ್ದ. ಸಾಲದುದಕ್ಕೆ ಅವನ ತೋಟೆ ತೋಳುಗಳಲ್ಲಿ ಬಿಳಿಯ ಕಲೆ ತುಂಬಿತ್ತು.

"ಈಗ ಹ್ಯಾಗಿದ್ದಿ ಚೆನ್ನಾಗಿ ವಾಸಿಯಾಯಿತೇನು?" ಚಿಕ್ಕಪ್ಪ ಕೇಳಿದರು.

"ಚೆನ್ನಾಗಿದೀನಿ ಅಯ್ಯ. ನಾಗನಾಯ್ಕರಿಂದ ನನ್ನ ಜೀವ ಉಳಿಯಿತು" ಎಂದು ಹೇಳಿದ.

ನನಗೆ ಕುತೂಹಲ ಕೆರಳಿತು. ಅವಕ್ಕೆ ಉತ್ತರವಾಗಿ ಚಿಕ್ಕಪ್ಪನು ನಡೆದ ಘಟನೆಯನ್ನು ಹೇಳಿದರು. ಬಿದಿರು ಕಡಿಯಲು ಹೋದಾಗ ಹುಲಿಯೊಂದು ಅವನ ಮೇಲೆ ಹಾರಿತು. ಅದರ ಪಂಜರಗಳಿಂದ ಅವನ ತೊಡೆ ತೋಳುಗಳ ಮಾಂಸ ಕಿತ್ತು ಬಂದು ರಕ್ತ ಚಿಮ್ಮಿ ಹರಿಯಿತು. ಅವನನ್ನು ಕಚ್ಚಿ ಕೊಲ್ಲದೆ ಹಾಗೆಯೇ ಬಿಟ್ಟದ್ದು ಅವನ ಅದೃಷ್ಟವೇ ಸರಿ. ಇವನ ಜೊತೆಯಲ್ಲಿದ್ದವರು ಅವನನ್ನು ನಾಗನಾಯ್ಕನ ಮನೆಗೆ ಹೊತ್ತು ತಂದರು. ಅವನ ಔಷಧಿಯಿಂದ ಈತ ಬದುಕಿಕೊಂಡ.

ಘಟನೆಯನ್ನು ಕೇಳುತ್ತಿರುವಂತೆ ನಾನು ಭಯದಿಂದ ಒಳಗೇ ನಡುಗುತ್ತಿದ್ದೆ. ಇಂತಹ ಸುಂದರ ಪ್ರಕೃತಿಯೂ ಎಷ್ಟು ಭಯಾನಕ! ಎನಿಸಿತು. ಸ್ವಲ್ಪ ಸಪ್ಪಳವಾದರೂ ಬೆಚ್ಚಿಬೀಳುತ್ತಿದ್ದೆ.

ಈಗ ನಾವು ದಟ್ಟವಾದ ಕಾಡಿನ ನಡುವೆ ಹೋಗುತ್ತಿದ್ದೆವು. ಅಲ್ಲಿ ಹೆಮ್ಮರಗಳ ಕೊಂಬೆಯಲ್ಲಿ ಕಟ್ಟಿದ್ದ ಹೆಜ್ಜೇನಿನ ಗೂಡುಗಳಿಂದ ಜೇನು-ತುಪ್ಪ ಹನಿಹನಿಯಾಗಿ ಬೀಳುತ್ತಿತ್ತು. ರಂಜದ ಹೂವುಗಳು ನೆಲದ ಮೇಲೆ ರಾಶಿ ರಾಶಿಯಾಗಿ ಹರಡಿದ್ದವು. ಕಾಡುಮಲ್ಲಿಗೆ ಹೂಗಳು ತೋರಣ ಕಟ್ಟಿದ್ದವು. ಸುರಗಿಯ ಹೂವು ಸ್ವಾಗತಿಸುತ್ತಿತ್ತು. ಸಂಪಿಗೆಯು ಕಂಪನ್ನು ಬೀರುತ್ತಿತ್ತು. ಅಲ್ಲಿಯ ಸದಾ ತಂಪು ಕವಿಗಳಿಗೆ ಇಂಪು.

ಹಿಂದಿನ ರಾತ್ರಿಯಷ್ಟೇ ಸ್ವಲ್ಪ ಮಳೆಯಾಗಿತ್ತು. ಮಾವಿನಹಣ್ಣುಗಳು ನೆಲದ ಮೇಲೆ ಬಿದ್ದಿದ್ದವು. ಹಣ್ಣುಗಳ ಭಾರದಿಂದ ನೇರಳೆ ಮರದ ಕೊಂಬೆ ಬಾಗಿತ್ತು. ಕೋತಿಗಳು ಹಲಸಿನ ಹಣ್ಣಿನ ತೊಳೆಗಳನ್ನು ತಿನ್ನುತ್ತಿದ್ದವು.

ಈಗ ನಾವು ಬೆಟ್ಟದ ಮೇಲಕ್ಕೆ ಬಂದಿದ್ದೆವು. ಸುತ್ತಲೂ ದಟ್ಟವಾದ ಅಡವಿ. ಸಾಲು ಬೆಟ್ಟಗಳು. ದೂರದಲ್ಲಿ ಅಲ್ಲಲ್ಲಿ ಕಾಣಿಸುವ ತೋಟ ಗದ್ದೆ, ಮನೆಗಳು. ತಣ್ಣನೆ ಬೀಸುವ ಗಾಳಿ. ಎಲ್ಲೆಲ್ಲೂ ನೀರವ, ನಿಶ್ಶಬ್ದ. ಅಲ್ಲಲ್ಲಿ ಪಾಳು ಕೋಟೆ. ಉರುಳಿಬಿದ್ದ ಫಿರಂಗಿಗಳು ಗತಕಾಲದ ಗುರುತಾಗಿ ನಿಂತ ಬತೇರಿ, ಶಾಸನದ ಕಲ್ಲುಗಳು. ಬೆಟ್ಟದ ಒಂದು ಪಾರ್ಶ್ವದಲ್ಲಿ ಭೂತಾಕಾರವಾದ ಬಂಡೆಯೊಂದು ವ್ಯಾಪಿಸಿದೆ. ಕೆಳ ಭಾಗದ ಭೂಮಟ್ಟದಿಂದ ಸುಮಾರು ಒಂದೂವರೆ ಸಾವಿರ ಅಡಿಗಳಿಗಿಂತಲೂ ಎತ್ತರವಾಗಿ . ಎರಡು ಕಿಲೋಮೀಟರುಗಳಷ್ಟು ದೂರ ಬೆಟ್ಟವನ್ನು ಆವರಿಸಿ ನಿಂತ ಅವರ ಆಕಾರವನ್ನು ಕಂಡು ಆಶ್ಚರ್ಯವಾಯಿತು. ಸಹಸ್ರಾವಧಿ ವರ್ಷಗಳಿಂದ ಸ್ಥಿತಪ್ರಜ್ಞನಂತೆ ಮಳೆ ಬಿಸಿಲು ಬಿರುಗಾಳಿಗೂ ಜಗ್ಗದೆ ವೈತರೆದು ನಿಂತಿದೆ. ಬಿರುಕಿಲ್ಲ, ಭಗ್ನತೆಯಿಲ್ಲ. ಪ್ರಕೃತಿಯ ಅದ್ಭುತ ಸೃಷ್ಟಿಗೆ ತಲೆದೂಗಿದೆ.

ಚಿಕ್ಕಪ್ಪ ಅಲ್ಲಿಯ ಇತಿಹಾಸವನ್ನು ಹೇಳುತ್ತಿದ್ದರು. ಆದರೆ ನನ್ನ ಮನಸ್ಸು ನನ್ನ ದೃಷ್ಟಿ ಅಲ್ಲಿ ಸೆರೆಯಾಗಿತ್ತು.

ಮತ್ತೆ ಏನೋ ಸರಸರ ಶಬ್ದವಾಯಿತು. ಗಕ್ಕನೆ ನಿಂತೆ. ಬೈನೆ ಮರದ ಕಳ್ಳನ್ನು ಗಡಿಗೆಗೆ ತುಂಬಿಸಿಕೊಂಡ ಆ ವ್ಯಕ್ತಿ ನನ್ನ ಚಿಕ್ಕಪ್ಪನನ್ನು ನೋಡಿ ಹಾಗೆಯೇ ತಲೆ ಬಾಗಿ ಮರಗಳ ಸಂದಿನಲ್ಲಿ ಮರೆಯಾದ.

"ನೋಡು ಇವನ ತೊಡೆಯನ್ನು ಒಂದು ಕಾಡುಕೋಣ ಕೊಂಬಿನಿಂದ ಸಿಗಿದು ಹಾಕಿತ್ತು."

ನಾನು "ಅಯ್ಯೋ" ಎಂದೆ.

"ಇವನಿಗೂ ನಾಗನಾಯ್ಕನೇ ಔಷಧ ಕೊಟ್ಟು ವಾಸಿಮಾಡಿದ."

"ಅವನು ಅಷ್ಟು ದೊಡ್ಡ ವೈದ್ಯನೆ ಚಿಕ್ಕಪ್ಪ?"

"ಹೌದು, ದೊಡ್ಡ ದೊಡ್ಡ ರೋಗಗಳಿಗೂ ಔಷಧ ಕೊಟ್ಟು ವಾಸಿಮಾಡುತ್ತಾನೆ." "ಅವನನ್ನು ನೋಡಬಹುದೆ?" "ಈಗ ನಾವು ಅವನ ಮನೆಯ ಎದುರಿನ ದಾರಿಯಲ್ಲೇ ಹೋಗಬೇಕಾಗಿದೆ. ನಿನಗೆ ಇಷ್ಟವಿದ್ದರೆ ಹೋಗೋಣ."

"ಖಂಡಿತವಾಗಿ."

ನಾವು ಒಂದು ಪುಟ್ಟ ಮನೆಯ ಅಂಗಳಕ್ಕೆ ಬಂದೆವು. ಹುಲ್ಲು ಹೊದಿಸಿದ ಮನೆ. ಮನೆಯ

ಹಿಂಭಾಗದಲ್ಲಿ ಒಂದು ಪುಟ್ಟ ಜಲಪಾತ. ನಾವು ಇಳಿದು ಬಂದ ಬೆಟ್ಟದ ಮೇಲಿಂದ ಹರಿದು ಬರುವ ಝರಿ. ನಾವಿಬ್ಬರೂ ಅದರಲ್ಲಿ ಕೈ ಕಾಲು ಮುಖ ತೊಳೆದುಕೊಂಡೆವು. ಈ ಜಲಪಾತದ ನೀರಿನಲ್ಲಿ ಎಂಥಹ ಸುವಾಸನೆ! ಇಂತಹ ಪರಿಮಳೋದಕದಲ್ಲಿ ನಾನು ಎಂದೂ ಕೈ ಕಾಲು ಮುಖ ತೊಳೆದಿರಲಿಲ್ಲ. ಮನೆಯ ಅಂಗಳದಲ್ಲಿದ್ದ ಕಲ್ಲು ಚಪ್ಪಡಿಯ ಮೇಲೆ ಕುಳಿತೆವು. ಇದೊಂದು ಋಷ್ಯಾಶ್ರಮದಂತೆ ಕಾಣಿಸಿತು. ಮನೆಯ ಸುತ್ತೆಲ್ಲ ಮಲ್ಲಿಗೆ ಜಾಜಿ, ಸೇವಂತಿಕೆಯ ಹೂವುಗಳು ಬಾಳೆಯ ತೋಟ ತೆಂಗಿನಮರಗಳು ತಲೆಯಾಡಿಸುವ ಮಾವು ಹಲಸಿನ ಮರಗಳು.

ಸ್ವಲ್ಪ ಹೊತ್ತಿನಲ್ಲಿ ಒಳಗಿನಿಂದ ಮನೆಯ ಯಜಮಾನ ಹೊರಗೆ ಬಂದ. ಚಿಕ್ಕಪ್ಪನನ್ನು ಕಂಡು ಭಕ್ತಿಯಿಂದ ಕೈಮುಗಿದು "ಅಡ್ಡಬಿದ್ದೆ ಬುದ್ಧಿ. ಬಡವರ ಮನೆಗೆ ಭಾಗೀರಥೀ ಬಂದ ಹಾಗೆ ಆಯಿತು" ಎಂದು ಹೇಳಿದ.

"ಹೇಗಿದ್ದಿ ನಾಗನಾಯ್ಕ?"

"ಹೀಗಿದ್ದೇನೆ ಬುದ್ಧಿ; ತಮ್ಮ ದಯ."

"ಮನೆಯವಳು ಚೆನ್ನಾಗಿದಾಳಾ?"

"ಇದಾಳೆ ಬುದ್ಧಿ."

"ವಾಯು ನೋವಿಗೆ ಔಷಧ ಕೊಟ್ಟಿದ್ದೆ ನಿನ್ನ ಕೈಗುಣದಿಂದ ಮೂರೇ ದಿನಕ್ಕೆ ಪರಾರಿಯಾಯಿತು."

"ನಂದೇನೈತಿ ಬುದ್ಧಿ; ಹಿರಿಯೋರ ಆಶೀರ್ವಾದ; ದೇವರ ದಯ;" ಚಿಕ್ಕಪ್ಪ ನನ್ನನ್ನು ಅವನಿಗೆ ಪರಿಚಯ ಮಾಡಿಸಿ "ನೀನು ಔಷಧ ಕೊಡೋದನ್ನು ಇವರೂ ನೋಡಬೇಕು ಎಂದು ಇಷ್ಟಪಟ್ಟಿದ್ದಾರೆ..."

"ಅದಕ್ಕೇನು ಬುದ್ಧಿ, ಗುರುವಾರ ಬಂದ್ರೆ ಬುದ್ಧಿಯೋರು ನೋಡ್ಬಹುದು" ಎಂದು ಸಂಕೋಚವಿಲ್ಲದೆ ಹೇಳಿದ.

ಗುರುವಾರ ಬಂತು. ಅಂದು ಮಾತ್ರ ಅವನು ಔಷಧ ಕೊಡುವವ. ಬೆಳಿಗ್ಗೆ ಬೇಗನೇ ಎದ್ದು ನಾಗನಾಯ್ಕನ ಮನೆಗೆ ಬಂದಿದ್ದೆ. ಆಗಲೇ ನಾಲ್ಕಾರು ಎತ್ತಿನ ಗಾಡಿಗಳು ಬಂದು ನಿಂತಿದ್ದವು. ರೋಗಿಗಳ ಪರೀಕ್ಷೆಯೂ ಆರಂಭವಾಗಿತ್ತು.

ಆ ರೋಗಿಯ ಕಾಲುಗಂಟಿನ ಕೆಳ ಭಾಗದಲ್ಲಿ ಭಾರಿ ಹುಣ್ಣಾಗಿತ್ತು. ಕೀವು ತುಂಬಿಕೊಂಡು ದುರ್ನಾತ ಬಡಿಯುತ್ತಿತ್ತು. ಈವರೆಗೂ ಆಸ್ಪತ್ರೆಯ ಔಷಧದಿಂದ ವಾಸಿ ಆಗಿಲ್ಲ. ಕ್ರಮೇಣ ತೊಡೆಯಲ್ಲೂ ಕಾಣಿಸಿಕೊಳ್ಳುತ್ತಿದೆ. ಕಾಲನ್ನು ಕತ್ತರಿಸಿ ಹಾಕದಿದ್ದರೆ ಜೀವಕ್ಕೇ ಅಪಾಯ ಎಂದು ಡಾಕ್ಟರು ಹೇಳಿದ್ದರಂತೆ. ರೋಗಿ ತನ್ನ ಕರ್ಮಕಥೆಯನ್ನು ಹೇಳಿಕೊಂಡು ಅಳುತ್ತಿದ್ದ.

ನಾಗನಾಯ್ಕ ಹುಣ್ಣನ್ನು ಪರೀಕ್ಷಿಸಿದ. ಹಳದಿ ಬಣ್ಣದ ನೀರಿನಿಂದ ಹುಣ್ಣನ್ನು ತೊಳೆದ. ಕಂದು ಬಣ್ಣದ ಪುಡಿಯನ್ನು ಹುಣ್ಣಿನೊಳಕ್ಕೆ ತುಂಬಿಸಿದ. ಆ ಭಾಗಕ್ಕೆ ಯಾವುದೋ ಹಸಿರು ಎಲೆಯನ್ನು ಇಟ್ಟು ಕಟ್ಟಿಹಾಕಿದ. ನಂತರ ನೀರಿನಲ್ಲಿ ಹಾಕಿ ಹುಣ್ಣನ್ನು ತೊಳೆಯುವ ಪುಡಿ, ಹುಣ್ಣಿಗೆ ತುಂಬುವ ಪುಡಿಯನ್ನು ಕೊಟ್ಟು ಅದನ್ನು ಯಾವ ಪ್ರಮಾಣದಲ್ಲಿ ಎಷ್ಟು ದಿನ ಹಾಕಬೇಕು ಎಂದು ಹೇಳಿದ. ಗಾಯ ಮಾಯುತ್ತಿರುವಂತೆ ಹಚ್ಚಬೇಕಾದ ತೈಲವನ್ನು ಕೊಟ್ಟು ಊಟದಲ್ಲಿ ಸೇವಿಸಬೇಕಾದ ವಸ್ತುಗಳನ್ನು ಹೇಳಿದ. ಸೇವಿಸಲು ಗುಳಿಗೆಗಳನ್ನು ಕೊಟ್ಟು. "ನೀನೇನೂ ಹೆದರಬೇಡ; ಒಂದು ತಿಂಗಳಲ್ಲಿ ಹುಣ್ಣು ವಾಸಿಯಾಗಿ ಚರ್ಮ ಬೆಳೆಯುತ್ತದೆ. ಕಾಲನ್ನು ಕತ್ತರಿಸಬೇಕಿಲ್ಲ" ಎಂದು ಹೇಳಿದ.

ಇನ್ನೊಬ್ಬ ಅಸ್ತಮಾ ರೋಗಿ. ಉಸಿರಾಡಲು ಆಗದಷ್ಟು ಕಫ ಕಟ್ಟಿತ್ತು. ಅವನನ್ನು ಬಹಳ ಹೊತ್ತು ಪರೀಕ್ಷಿಸಿ ಭಸ್ಮ-ಗುಳಿಗೆಗಳನ್ನು ಕೊಟ್ಟು ಸೇವಿಸುವ ಕ್ರಮವನ್ನು ತಿಳಿಸಿದ ಯಾವ ವಸ್ತುಗಳನ್ನು ತಿನ್ನಬಾರದೆಂಬುದನ್ನು ಹೇಳಿ ಎರಡು ವರ್ಷ ಬಿಡದೆ ಔಷಧ ತೆಗೆದುಕೊಳ್ಳಬೇಕೆಂದು ತಿಳಿಸಿದ.

ಹೊಟ್ಟೆ ನೋವಿನ ರೋಗಿ ಬಿದ್ದು ಹೊರಳಾಡುತ್ತಿದ್ದ. ಅವನನ್ನು ಚೆನ್ನಾಗಿ ಪರೀಕ್ಷಿಸಿ ಔಷಧವನ್ನು ಕೊಟ್ಟು ಹೊಗೆಸೊಪ್ಪು, ಹೆಂಡಗಳನ್ನು ಮುಟ್ಟಕೂಡದೆಂದು ಎಚ್ಚರಿಕೆ ಕೊಟ್ಟ.

ಕಾಮಾಲೆ ರೋಗದಿಂದ ಮೈಯೆಲ್ಲ ಹಳದಿಯಾಗಿ ಬಾತುಕೊಂಡ ರೋಗಿಯನ್ನು ನೋಡಲು

ಯಾರನ್ನಾದರೂ ಕೊಂದುಬಿಡ್ತಿ ಅಂತ ಬಯ್ತಿತ್ತು."

"ಆಗ ನಿನಗೆ ಸಿಟ್ಟು ಬರ್ತಾ ಇರಲಿಲ್ಲವೆ"

"ಸಿಟ್ಟು ಯಾಕೆ ಮಾಡ್ಬೇಕು ಅಯ್ಯ! ಹಿರಿಯೋರು ತಪ್ಪು ಮಾಡಾಕೆ ಹೇಳಿಕೊಡ್ತಾರಾ? ಇವೂ ಅಲ್ದೆ ಸಾವು ಜೀವದ ಜೊತೆಯಾಗೇ ಆಟವಾಡೋರು. ಸ್ವಲ್ಪ ಹೆಚ್ಚು ಕಡಿಮೆ ಆದರೆ ಜೀವ ಉಳೀತೈತಾ..."

"ಕಲಿಯಂಲು ನಿನಗೆ ಎಷ್ಟು ವರ್ಷ ಬೇಕಾಯಿತು?" "ಅಯ್ಯನ ಜೊತೇಲಿ ಸುಮಾರು ಇಪ್ಪತ್ತು ವರ್ಷ ಕಲಿತುಕೊಂಡೆ ಅಷ್ಟರೊಳಗೆ ನನಗೆ ರೋಗದ ಲಕ್ಷಣ. ಔಸ್ದ ಎಲ್ಲಾ ಗೊತ್ತಾತು."

"ನಿನಗೆ ಓದು ಬರಾವು ಬರುತ್ತದೆಯೆ?"

"ಇಲ್ಲ ಅಯ್ಯ, ಎದೆ ಸೀಳಿದರೂ ನನಗೆ ಒಂದು ಅಕ್ಷರಾನೂ ಬರಾಕಿಲ್ಲ. ಅಂಥ ಪುಣ್ಯ ನಮ್ಮಂಥೋರಿಗೆ ಎಲ್ಲಿ ಬರಬೇಕು; ಎಲ್ಲಾ ಪರೀಕ್ಷೆ, ಅನುಭವ ಇದರ ಮೇಲೇ ಕಲಿತಿದ್ದು."

"ನೀನು ಗಿಡಮೂಲಿಕೆಗಳನ್ನು ಎಲ್ಲಿಂದ ತರಿಸಿಕೊಳ್ತಿಯಾ?" "ಇಲ್ಲೆ ಬೆಟ್ಟದ ಮೇಲೆ ಸಿಕ್ತೈತೆ. ಇನ್ನು ಕೆಲವು ಮೂಲಿಕೆಗಳನ್ನು ಮನೆ ಹತ್ತಿರಾನೇ ಬೆಳಸಿಕೊಂಡಿವ್ನಿ. ಇನ್ನು ಕೆಲವು ಜಾತಿ ಇಲ್ಲಿ ಸಿಕ್ಕಾಕಿಲ್ಲ. ಘಾಟಿಕಡೆ ಐತೆ."

"ನೀನೆ ಹೋಗಿ ತರ್ತೀಯಾ?"

"ಸಿದ್ಧರು ಅಂತ ಒಂದು ಜಾತಿ ಜನ ಇಲ್ಲಿಗೆ ಬರ್ತಾನೇ ಇರ್ತಾರೆ; ಭಾಳ ನಂಬಿಕೆ ಜನ. ಅವರಿಗೆ ಎಲ್ಲಾ ಗಿಡಗಳ ಮೂಲಿಕೆಗಳ ಗುರುತು ಚೆನ್ನಾಗಿ ಐತೆ. ಕೆಲವು ಮೂಲಿಕೆಗಳನ್ನು ಅಮಾಸ್ಯೆ, ಹುಣ್ಣಿಮೆ, ಗ್ರಹಣ ಇಂಥಾ ದಿನವೇ ಕೀಳಬ್ಯಾಕು, ಬೇರೆ ದಿನ ಕಿತ್ತರೆ ಬರಾಕಿಲ್ಲ. ನಿರ್ವಾಣದಲ್ಲೇ ಕೀಳಬೇಕು. ಸಿದ್ದರು ಇಂಥಾ ದಿನಗಳಲ್ಲಿ ಗಿಡಮೂಲಿಕೆ ಕಿತ್ತು ಇಟ್ಟುಕೊಂಡಿರ್ತಾರೆ."

"ಅವರಿಗೆ ಎಷ್ಟು ಹಣ ಕೊಡಬೇಕು ?"

"ಹಣ ಏನೂ ಇಲ್ಲ ಅಯ್ಯ, ಸೇದಾಕೆ ಭಂಗಿ ಕೊಟ್ರೆ ಆಯ್ತು."

"ಅದನ್ನು ಎಲ್ಲಿಂದ ತರುತ್ತಿ?"



"ಮನೆ ಹಿಂದಲಿನ ಸರಕಲಿನಲ್ಲಿ ನಾನೇ ಬೆಳಸಿ ಇಟ್ಟೆನ್ವಿ."

"ಖಾಹಿಲೆ ವಾಸಿ ಮಾಡಿದ್ದಕೆ ಹಣ ತೆಗೆದು ಕೊಳ್ತಿಯಾ ?"

"ಇಷ್ಟೇ ಹಣ ಕೊಡಿ ಅಂತ ಕೇಳಾಕಿಲ್ಲ. ಕೊಟ್ಟರೆ ತಗೋತೀನಿ, ಇಲ್ದಿದ್ರೆ ಕೇಳಾಕಿಲ್ಲ. ಹಾಂಗೆ ಕೇಳಬಾರ್ದು ಅಂತ ಅಯ್ಯ ಹೇಳಿ ಸತ್ತೈತೆ".

"ಔಷಧ ತಯಾರಿಸಲು ಖರ್ಚು ಬರುವದಿಲ್ಲವೆ?" "ಭಾಳ ಖರ್ಚು ಬರ್ತೈತೆ. ಬಂಗಾರ, ಪಂಚಲೋಹ, ಪಾದರಸ, ಪ್ರವಾಳ ತೈಲಕ್ಕೆ, ಎಣ್ಣೆ ಹೀಗೆ ಖರ್ಚು ಬರ್ತೈತಿ. ಯಾರಾದರೂ ಪುಣ್ಯಾತ್ಮರು ಕೊಡ್ತಾನೆ ಇರ್ತಾರೆ. ಖಾಹಿಲೆ ವಾಸಿಯಾದೋರು ಕೊಡ್ತಾರೆ. ನನ್ನ ಹೆಂಡ್ತಿ ಮನೆಯ ಆಸ್ತಿಯದು ಅಷ್ಟಿಷ್ಟು ಬರ್ತೈತೆ: ನಮ್ಮ ಮನೆಯಾಗೆ ಹೆಚ್ಚಾದ ದನಕರು ಹೋರಿಗಳನ್ನು ಮಾರಿ ಔಸ್ಧದ ಖರ್ಚಿಗೆ ಹಾಕ್ತೀನಿ. ಹೇಗೋ ನಡೆಸ್ಕೊಂಡು ಹೋಗ್ತಾ ಐತೆ."

"ನೀನು ಕೊಡುವ ಔಷಧದಿಂದ ಖಾಹಿಲೆ ಪೂರ್ತಿಯಾಗಿ ವಾಸಿಯಾಗುತ್ತದೆಯೆ?"

"ಎಂಥ ಕೆಟ್ಟ ಖಾಹಿಲೆ ಇದ್ದರೂ ವಾಸಿ ಆಗ್ತೈತೆ. ಎಲ್ಲಾದರೂ ಒಂದೆರಡು ಉಳೀ ಬೌನು ಅಷ್ಟೆ."

"ವಾಸಿಯಾದವರು ಬಂದು ಹೇಳ್ತಾರಾ?"

"ಕೆಲವರು ಬಂದು ಹೇಳ್ತಾರೆ; ಕೆಲವರು ಹೇಳಾಕಿಲ್ಲ. ದೊಡ್ಡ ದೊಡ್ಡ ಡಾಕ್ಟರೂ ಬಂದು ಔಷಧ ತೆಗೊಂಡು ವಾಸಿಯಾಗಿದಾರೆ. ಅವರ ಇಂಜೆಕ್ಷನ್ ವಾಸಿ ಮಾಡಲಿಲ್ಲ ಅಂತ ಹೇಳಿದರು. ಹಾಗೆ ಕೈತುಂಬಾ ಹಣಾನು ಕೊಟ್ರು."

"ಇಲ್ಲಿ ಬೀಸುವ ಗಾಳಿಯಲ್ಲಿ. ಹರಿಯುವ ನೀರಿನಲ್ಲಿ ತುಂಬಾ ಪರಿಮಳ ಇದೆ; ಕಾರಣ ಏನು?"

"ಗಾಳಿ ಗಿಡಮೂಲಿಕೆಗಳ ಮೇಲೆ ಬೀಸಿಕೊಂಡು ಬರ್ತೈತೆ. ನೀರು ಗಿಡಮೂಲಿಕೆಗಳ ಬೇರನ್ನು ತೊಳೆಯುತ್ತಾ ಬರ್ತೈತೆ. ಈ ನೀರಿನಲ್ಲಿ ಮಾತ್ರ ನಾನು ಔಸ್ಧ ಮಾಡುತೀನಿ. ಬೇರೆ ನೀರಿನಲ್ಲಿ ಬರಾಕಿಲ್ಲ."

ನಾಗನಾಯ್ಕನ ಒಪ್ಪಿಗೆ ಪಡೆದು ನಾನು ಅವನ ಮನೆಯೊಳಗೆ ಹೋದೆ. ಅದೊಂದು ಪುಟ್ಟ ಪ್ರಯೋಗಶಾಲೆ. ಮಾಸೆಗಳು, ಕಲ್ಲು, ಪತ್ರುಗಳು, ತಕ್ಕಡಿಗಳು ಒಣಗದ ಮೂಲಿಕೆಗಳು, ಗುಳಿಗೆ, ಭಸ್ಮ–ತೈಲಗಳು ಕಾಣಿಸಿದವು. ಕೆಡದಂತೆ ಒಪ್ಪವಾಗಿ ಜೋಡಿಸಿಡಲಾಗಿತ್ತು. ಶುಭ್ರವಾದ ಮನೆ ದೇವರ ವಿಗ್ರಹವಾಗಲಿ ಪಟವಾಗಲಿ ಕಾಣಿಸಲಿಲ್ಲ. ಪ್ರಯೋಗಶಾಲೆಯು ಔಷಧಗಳ ವಾಸನೆಯಿಂದ ತುಂಬಿತ್ತು.

ಎಲ್ಲವನ್ನು ನೋಡಿಕೊಂಡು ಹೊರಗೆ ಬಂದೆ. "ನಿಮಗೆ ಎಷ್ಟು ಜನ ಮಕ್ಕಳಿದ್ದಾರೆ? ಯಾರೂ ಕಾಣಿಸುವುದಿಲ್ಲ ಏಕೆ?" ನಾನು ಕುತೂಹಲದಿಂದ ಕೇಳಿದೆ.

"ಭಗವಂತ ಒಬ್ಬ ಮಗನನ್ನು ಕೊಟ್ಟಿದ್ದ. ಆಯುಸ್ಸು ಮುಗೀತು; ಹಿಂದಕ್ಕೆ ಕರೆಸಿಕೊಂಡ."

ನಾಗನಾಯ್ಕನ ಧ್ವನಿಯು ಭಾರವಾಗಿ ಕಣ್ಣು ಆಕಾಶವನ್ನು ನೋಡುತ್ತಿತ್ತು. ನನ್ನ ಮನಸ್ಸು ಅಳುಕಿತು. ಹೆಚ್ಚು ಕೇಳಿ ಅವನ ಮನಸ್ಸನ್ನು ನೋಯಿಸಬಾರದೆಂದು ಸುಮ್ಮನಾದೆ.

"ಔಷಧ ತಗೊಂಡು ವಾಸಿಯಾಗಾಕೆ ಬಡವರು ಶ್ರೀಮಂತರು ನೌಕರರು ಎಲ್ಲಾ ಬರ್ತಾರೆ. ಸರಕಾರಿ ಆಸ್ಪತ್ರೆ ಐತೆ. ಡಾಕ್ಟರೂ ಇದಾರೆ. ಆದರೆ ನಮ್ಮ ಹಳೇ ಕಾಲದ ಗಿಡಮೂಲಿಕೆಗಳ ಶಕ್ತಿ ಹೇಗೈತಿ ಅಂತ ತಿಳಿಯಾಕೆ ಯಾರಿಗೂ ಮನಸ್ಸಿಲ್ಲ. ನನಗೆ ಮಕ್ಕಳು ಇಲ್ಲ ಅಂತ ದುಃಖ ಇಲ್ಲ. ಆದರೆ ತಲೆಯಾಂತರದಿಂದ ಬಂದ ಈ ವಿದ್ಯೆ ನನ್ನ ಜೊತೆಯಾಗೇ ಮಣ್ಣಾಗ್ತೈತೆ ಅಂತ ಮನಸ್ಸಿನಲ್ಲಿ ಮರುಕ ಕೊರೆದ ಹಾಗೆ ಕೊರಗ್ತಾನೇ ಇದೀನಿ. ಕಲಿಸಿಕೊಡ್ತೀನಿ ಅಂತ ಕರೆದರೂ ಯಾರೂ ಬರಾಕಿಲ್ಲ. ಆಸ್ಪತ್ರೆ ಔಷಧ ಸಿಕ್ತೈತೆ; ಇಂಜಕ್ಷನ್ ಕೊಡ್ತಾರೆ. ಈ ಅಳಲೆಕಾಯಿ ಪಂಡಿತರನ್ನು ಯಾರು ಕೇಳ್ತಾರೆ ಅಂತ ಜನ ಮೂಗು ಮುರೀತಾರೆ. ನಿಮ್ಮ ಹಾಗೆ ಯಾರೂ ಪ್ರೀತಿ — ವಿಶ್ವಾಸದಿಂದ ವಿಚಾರಿಸಿ ತಿಳಿದು ಕೊಂಡಿಲ್ಲ."

ನಾಗನಾಯ್ಕನ ಕಣ್ಣಂಚಿನಿಂದ ಒಂದು ಹನಿ ಕಣ್ಣೀರು ಜಾರಿ ಕೆಳಗೆ ಬಿತ್ತು.

ಸುಮಾರು ಮೂವತ್ತು ವರ್ಷಗಳು ಕಳೆದಿವೆ. ಈ ಅವಧಿಯಲ್ಲಿ ನಾನು ಅನೇಕ ಊರುಗಳಲ್ಲಿ ಪ್ರವಾಸಮಾಡಿದ್ದೇನೆ. ಆದರೆ ಆ ಹಳ್ಳಿಯಲ್ಲಿ ಕಳೆದ ಕಾಲ ನಾಗನಾಯ್ಕನ ನೆನಪು ಇನ್ನೂ ಹಸಿರಾಗಿಯೇ ಉಳಿದಿತ್ತು. ಈಗ ಅದೇ ಹಳ್ಳಿಗೆ ಅದೇ ಮನೆಗೆ ಮತ್ತೆ ಬಂದಿದ್ದೆ. ಅಲ್ಲಿ ಏನೇನೋ ಬದಲಾವಣೆಗಳಾಗಿವೆ. ಚಿಕ್ಕಪ್ಪನ ಮನೆಗೆ ತೀರ ಸಮೀಪದಲ್ಲೇ ಟಾರು ರಸ್ತೆಯಾಗಿದೆ. ಹಗಲಿರುಳು ವಾಹನ ಸಂಚಾರವಿದೆ. ವಿದ್ಯುತ್ತಿನ ಕಂಬಗಳು ಕಾಡನ್ನು ಸೀಳಿ ಮುಂದೆ ಹೋಗಿವೆ.

"ನಾಗನಾಯ್ಕ ಹೇಗಿದ್ದಾನೆ ಚಿಕ್ಕಪ್ಪ ಮೊದಲಿನಂತೆ ಔಷಧ ಕೊಡುತ್ತಿದ್ದಾನೆಯೆ?" ಎಂದು ಕೇಳಿದೆ.

"ಇನ್ನೆಲ್ಲಿಯ ನಾಗನಾಯ್ಕ? ಅವನು ಸತ್ತು ಇಪ್ಪತ್ತು ವರ್ಷಗಳಾಯಿತು. ಮೊದಲು ಅವನ ಹೆಂಡತಿ ತೀರಿಕೊಂಡಳು. ಆ ಮೇಲೆ ಅವನಿಗೆ ಒಂದು ರೀತಿಯ ಮಂಕು ಹಿಡಿಯಿತು. ಒಮ್ಮೊಮ್ಮೆ ನಗುತ್ತಿದ್ದ. ಒಮ್ಮೊಮ್ಮೆ ಅಳುತ್ತಿದ್ದ. ಗಿಡಮೂಲಿಕೆಗಳನ್ನು ಕಣ್ಣಿಗೆ ಒತ್ತಿಕೊಳ್ಳುತ್ತಿದ್ದ."

ಎಂಥ ಅನ್ಯಾಯವಾಗಿ ಹೋಯಿತು...... ನಿಟ್ಟುಸಿರು ಬಿಟ್ಟೆ.

ಅವನ ನೆಂಟರು ಬಂದರು. ಇವನಿಗೆ ಹುಚ್ಚು ಹಿಡಿದಿದೆ ಎಂದರು. ಕೈಕಾಲು ಕಟ್ಟಿದರು. ಕೂಡಿ ಹಾಕಿದರು.

"ಆಮೇಲೆ ಏನಾಯಿತು ಚಿಕ್ಕಪ್ಪ?"

"ಊಟ ಮಾಡುತ್ತಿರಲಿಲ್ಲ. ಯಾವ ದುಃಖವೋ ಏನು ವ್ಯಥೆಯೋ ತಿಳಿಯದು. ಹೆಂಡತಿಯ ಸಾವು ಅವನ ಮನಸ್ಸನ್ನು ಒಡೆದಿರಬೇಕು. ಆರು ತಿಂಗಳಲ್ಲಿ ಅವನೂ ಕಣ್ಣು ಮುಚ್ಚಿದ. ಅವನ ಮನೆಯಲ್ಲಿದ್ದುದನ್ನು ಅವನ ಬಂಧುಗಳು ತೆಗೆದುಕೊಂಡುಹೋದರು. ಗದ್ದೆಯನ್ನು ಯಾರಿಗೋ ಮಾರಿದರು. ನಮ್ಮ ಊರಿನವರಿಗೂ ಸಿಗಲಿಲ್ಲ." ಈ ಘಟನೆಯನ್ನು ಕೇಳಿದಾಗ ನನಗೆ ಮಂಕು ಕವಿದಂತಾಗಿತ್ತು. ಎಷ್ಟೋ ಹೊತ್ತು ಸುಮ್ಮನೆ ಕುಳಿತಿದ್ದೆ.

ಮಾರನೆಯ ದಿನವೆಲ್ಲಾ ಅವನದೇ ನೆನಪು. ಇನ್ನೊಮ್ಮೆ ಆ ಬೆಟ್ಟವನ್ನು ಅವನು ವಾಸವಾಗಿದ್ದ ಮನೆಯನ್ನು ನೋಡಬೇಕೆನಿಸಿತ್ತು. ಆದರೆ ಹಿಂದಿನಂತೆ ಚಿಕ್ಕಪ್ಪ ಬರುವಂತಿರಲಿಲ್ಲ. ಅವರಿಗೆ ಈಗ ವಯಸ್ಸಾಗಿತ್ತು. ಆದರೂ ಅವರ ಎರಡನೆಯ ಮಗ ನನ್ನ ಜೊತೆಯಲ್ಲಿ ಬರಲು ಸಿದ್ಧನಾದ. ಇಬ್ಬರೂ ಹೊರಟೆವು. ಅದೇ ತೋಟ, ಅದೇ ದಾರಿ; ಆದರೆ ಬಿಸಿಲಿಗೆ ತಡೆಯಾಗಿ ನಿಂತ ಆ ಹಸಿರು ಕಾಡು ಹಳ್ಳಿಗೆ ನುಗ್ಗಿದ ನಾಗರಿಕತೆಗೆ ಬಲಿಯಾಗಿ ಬೋಳಾಗಿತ್ತು. ಹಳೆಯ ನೆನಪನ್ನು ಚುಚ್ಚುವಂತೆ ಅಲ್ಲಲ್ಲಿ ಮುಳ್ಳುಗಿಡಗಳು ಮಾತ್ರ ಉಳಿದಿದ್ದವು. ಆಗ ನಾನು ಕಂಡ ಹೂವು ಹಣ್ಣುಗಳು ಉಳಿದಿರಲಿಲ್ಲ. ಎಲ್ಲೆಲ್ಲೂ ನೀಲಗಿರಿಯ ಗಿಡಗಳು. ಮೂಗು ಒಡೆಯುವಂಥ ವಾಸನೆ. ಗಿಡಮೂಲಿಕೆಗಳು ಕಾಡಿನ ಬೆಂಕಿಯಲ್ಲಿ ಬೆಂದು ಬೂದಿಯಾಗಿವೆ. ಪಚ್ಚೆಯಂಥ ನೆಲ ಸುಟ್ಟು ಕಪ್ಪಾಗಿದೆ. ನಾಗನಾಯ್ಕನ ಮನೆ ಇದ್ದ ಸ್ಥಳದಲ್ಲಿ ಏನೂ ಉಳಿದಿಲ್ಲ. ಮನೆಯ ನಿವೇಶನದ ಮೇಲೆಯೇ ಹೊಸ ರಸ್ತೆಯು ಹಾದು ಹೋಗಿದೆ. ಗತಕಾಲದ ಗುರುತನ್ನು ಕಾಲಗರ್ಭಕ್ಕೆ ತಳ್ಳಿದ ಕರಿಯ ಬಣ್ಣದ ಟಾರು ರಸ್ತೆ. ಜಲಪಾತ ಬತ್ತಿದೆ. ಬಂಡೆಯ ಸಂದಿನಲ್ಲಿ ಕಣ್ಣೀರಿನಂತೆ ಒಂದೊಂದು ಹನಿ ಬೀಳುತ್ತಿದೆ. ಸಾವಿರಾರು ವರ್ಷಗಳ ಇತಿಹಾಸವನ್ನು ತುಂಬಿಕೊಂಡ ಬೆಟ್ಟದ ಮೇಲಿನ ಬಂಡೆಯು ಸಿಡಿಮದ್ದಿನಿಂದ ಸ್ಫೋಟಿಸುತ್ತಿದೆ. ಇದ್ದುದೆಲ್ಲವನ್ನು ಕಳೆದುಕೊಂಡು ಪರರ ಇಚ್ಛೆಗೆ ಬಾಯಿ ತೆರೆದಂತೆ ನೀಳ ನಿಟ್ಟುಸಿರುಬಿಡುತ್ತಿದೆ.

ಈಗ ನಾಗನಾಯ್ಕನು ಇತಿಹಾಸದ ಪುಟಗಳಿಗೆ ಸೇರಿದ ಒಬ್ಬ ಅನಾಮಧೇಯ ವ್ಯಕ್ತಿ. ನಮ್ಮೆಲ್ಲರ ದೃಷ್ಟಿಯಲ್ಲಿ ಒಬ್ಬ ಕಾಲ್ಪನಿಕ ವ್ಯಕ್ತಿ. ✡



# ಧ್ರುವಗಳನ್ನು ಕ್ರಮಿಸಿದ ಧೀರರು

ಸುಮಾರು ಮೂರು ವರ್ಷಗಳ ಹಿಂದೆ ಚಾರ್ಲ್ಸ್ ಬರ್ಟನ್ ಹಾಗೂ ರಾನುಲ್ಫ್ ಫೀನೇಜ್ ಎಂಬಿಬ್ಬರು ಬ್ರಿಟಿಶ್ ಸಾಹಸಿಗಳು ಎರಡೂ ಧ್ರುವಗಳನ್ನು ಭೇದಿಸಿ ಪ್ರಪಂಚವನ್ನು ಸುತ್ತುವ ಮೂಲಕ ವಿಕ್ರಮವನ್ನು ಸಾಧಿಸುವೆವೆಂದು ಹೇಳಿದಾಗ ಅವರ ಈ ಸಾಹಸವನ್ನು ವಿಕ್ಷಿಪ್ತ ಹಾಗೂ ಅತ್ಯದ್ಭುತವೆಂದು ಬ್ರಿಟನ್ನಿನ ರಾಜಕುಮಾರ ಬಣ್ಣಿಸಿದ್ದು ಸ್ವಾಭಾವಿಕವೇ ಆಗಿತ್ತು. ವಿಕ್ಷಿಪ್ತ ಹಾಗೂ ಅಸಂಭವವೆಂದು ತೋರುವ ಸಂಗತಿಗಳೇ ಕೆಲವೊಮ್ಮೆ ವಾಸ್ತವರೂಪವನ್ನು ತಾಳುತ್ತವೆಂಬುದಕ್ಕೆ ಕೊನೆಗೂ ಇವರೀರ್ವರ ಪ್ರವಾಸಿ ತಂಡ ನಿದರ್ಶನವಾಯಿತು. ಒಂದೂವರೆ ವರ್ಷದ ಹಿಂದೆ ದಕ್ಷಿಣ ಧ್ರುವವನ್ನು ದಾಟಿದ ಇವರು ಎರಡು ತಿಂಗಳ ಹಿಂದೆ ಉತ್ತರ ಧ್ರುವದಲ್ಲಿ ಯೂನಿಯನ್ ಜಾಕ್‌ಅನ್ನು ನೆಟ್ಟಾಗ ಏಕಾಏಕಿ ಬ್ರಿಟನ್ನಿನ ಹೀರೋ ಆದರು.

ಸರ್ ರಾನೂಲ್ಫ್ ಫಿನೇಜ್ (ಆತನ ಅಪ್ಪ ಹೆಸರು ಟ್ವೈಸಲೆಟನ್ ವೈಕೆಹ್ಯಾಂ ಫಿನೇಜ್. ಹೆಸರು ಉದ್ದವಾಗಿರುವುದರಿಂದ ಅದರ ಅರ್ಧವನ್ನು ಮೊಟಕುಗೊಳಿಸಿದ್ದಾರೆ) ಹದಿನೈದನೇ ಶತಮಾನದಲ್ಲಿ ಇಂಗ್ಲೆಂಡನ್ನಾಳಿದ ವಿಲಿಯಮ್ಮನ ವಂಶಕ್ಕೆ ಸೇರಿದಾತ. "ರಾನೂಲ್ಫ್ ಮುಂದೊಂದು ದಿನ ಹುಚ್ಚನಾದರೂ ಆಗುತ್ತಾನೆ, ದೊಡ್ಡ ನಾಯಕನೂ ಆಗುತ್ತಾನೆ ಎಂಬುದನ್ನು ಬಹಳ ಹಿಂದೆಯೇ ಕಂಡುಕೊಂಡಿದ್ದೆ. ಈ ಎರಡರ ಪೈಕಿ ಆತ ಮೊದಲಿನದನ್ನೇ ಆರಿಸಿಕೊಂಡಿದ್ದು ನನಗೆ ಸಂತೋಷವನ್ನೇ ತಂದಿದೆ," ಎನ್ನುತ್ತಾಳೆ ಫೀನೇಜನ ತಾಯಿ. ಆದರೆ ಬರ್ಟನ್ನನ ಜಾತಿಯೇ ಬೇರೆ. ಆತನೊಬ್ಬ ಮಾಜಿ ಸೈನ್ಯಾಧಿಕಾರಿ ಹಾಗೂ ರಗ್ಬಿ ಆಟಗಾರ.

ಫೀನೇಜನ ಹೆಂಡತಿಯನ್ನು ಒಳಗೊಂಡಂತೆ ಒಟ್ಟು ಇಪ್ಪತ್ತುಮೂರು ಜನರಿರುವ ಈ ಪ್ರವಾಸಿ ತಂಡಕ್ಕೆ ಎರಡೂ ಧ್ರುವಗಳ ಮೂಲಕ ಪ್ರಪಂಚವನ್ನು ಸುತ್ತಲು ಆರು ವರ್ಷಗಳೇ ಹಿಡಿದವು. ಅದಕ್ಕಾಗಿ ಅವರು ಹದಿಮೂರು ಕೋಟಿ ರೂಪಾಯಿಗಳಷ್ಟು ಹಣವನ್ನು ವೆಚ್ಚ ಮಾಡಬೇಕಾಯಿತು. ಐವತ್ತೆರಡು ಮೈಲುಗಳ ಪ್ರವಾಸದಲ್ಲಿ ಇವರಿಬ್ಬರಿಗೂ ಐದಾರು ಬಾರಿ ಪ್ರಾಣಕ್ಕೆರವಾಗುವ ಪ್ರಸಂಗ ಬಂದು ಸ್ವಲ್ಪದರಲ್ಲೇ ಪಾರಾದರು.

ಫಿನೇಜ್ ಹಾಗೂ ಬರ್ಟನ್ನರು ಇನ್ನೂ ಆರು ನೂರು ಮೈಲಿನಷ್ಟು ಹಿಮಮಯ ಪ್ರದೇಶವನ್ನು ಕ್ರಮಿಸಿ ಸಮುದ್ರದಲ್ಲಿ ಅವರಿಗಾಗಿ ಕಾಯುತ್ತಿರುವ ಹಡಗಿನಲ್ಲಿ ಸಂಚರಿಸಿ ಮಾತೃಭೂಮಿಯನ್ನು ಸೇರಬೇಕು; ಅಂದಾಗ ಮಾತ್ರ ಅವರ ಗುರಿ ಪೂರ್ತಿಯಾದಂತೆ. ಅಲ್ಲಿಯವರೆಗೆ ಅವರು ವಿಘ್ನಗಳನ್ನು ಅನುಭವಿಸಬೇಕಾದದ್ದೇ. ಈಗೆರಡು ತಿಂಗಳ ಹಿಂದೆ ಆರ್ಕ್ಟಿಕ್ ಪ್ರದೇಶದಿಂದ ದಕ್ಷಿಣಕ್ಕೆ ನೂರು ಮೈಲಿಗಳಷ್ಟು ಅಂತರದಲ್ಲಿ ನಿರ್ಜನ ಪ್ರದೇಶವೊಂದರಲ್ಲಿ ಸಿಕ್ಕುಬಿದ್ದಾಗ ನಾಲ್ಕೇನಾಲ್ಕು ದಿನ ಸಾಲುವಷ್ಟು ಆಹಾರವಿತ್ತು.

ಅವರು ತಮ್ಮ ಪ್ರವಾಸವನ್ನು ಇನ್ನೂ ಪೂರ್ತಿಗೊಳಿಸಬೇಕಾಗಿದೆಯಾದರೂ ಮನಸ್ಸು ಮಾಡಿದರೆ ಈಗಾಗಲೇ ಅನೇಕ ವಿಕ್ರಮಗಳನ್ನು ಸಾಧಿಸಿದ್ದೇವೆಂದು ಹೇಳಿಕೊಳ್ಳಬಲ್ಲರು. ಈ ವರೆಗೆ ಒಂದೇ ಪ್ರವಾಸದಲ್ಲಿ ಎರಡೂ ಧ್ರುವಗಳನ್ನು ಕ್ರಮಿಸಿದವರು ಇವರು ಮಾತ್ರ. ಸ್ಕಾಟ್ ಹಿಮನದಿಯನ್ನು ಪಾರು ಮಾಡಿದವರಲ್ಲಿ ಇವರೇ ಮೊದಲಿಗರು. ಯೂಕೋನ್ ಕೊಳ್ಳವನ್ನೂ ಅಟ್ಲಾಂಟಿಕ್‌ನಿಂದ ಅಮೇರಿಕದ ಉತ್ತರದಲ್ಲಿನ ಶಾಂತಸಾಗರವನ್ನು ಸೇರುವ ಸಮುದ್ರಮಾರ್ಗವನ್ನು ಒಂದೇ ಋತುವಿನ ಅವಧಿಯಲ್ಲಿ ಈ ವರೆಗೆ ಕ್ರಮಿಸಿದವರೆಂದರೆ ಇವರಿಬ್ಬರೆ.

ಸಾಹಸ ಯಾವಾಗಲೂ ಚೇತೋಹಾರಿಯಾಗಿರುತ್ತದೆನ್ನುವುದು ಸುಳ್ಳೆ?

("ನ್ಯೂಜ್‌ವೀಕ್" ಪತ್ರಿಕೆಯಿಂದ)

# ನಿಮ್ಮ ಶಬ್ದ ಭಾಂಡಾರ ಬೆಳೆಯಲಿ

## ಶಬ್ದಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ.

ಇಲ್ಲಿ ಪ್ರತಿ ತಿಂಗಳೂ ಕೆಲವು ಶಬ್ದಗಳನ್ನು ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.

೧. **ಅಷ್ಟಕ**
(ಅ) ಉಪ್ಪರಿಗೆ (ಆ) ಚೌಕಟ್ಟು (ಇ) ನಿಚ್ಚಣಿಕೆ (ಈ) ಎಂಟರ ಗುಂಪು

೨. **ಅಶ್ಲೀಲ**
(ಅ) ಅಸಭ್ಯ (ಆ) ಕಷ್ಟಕರ (ಇ) ಆಟ (ಈ) ಪರ್ವತ

೩. **ಖುದ್ದು**
(ಅ) ಜೀಯುವಿಕೆ (ಆ) ಆಪತ್ತು (ಇ) ಸ್ವತಃ (ಈ) ಒದೆ

೪. **ಕುದುವು**
(ಅ) ಕೊರತೆ (ಆ) ಒತ್ತು (ಇ) ತಿಪ್ಪೆ (ಈ) ಗುದ್ದಲಿ

೫. **ಸಾಭಿಪ್ರಾಯ**
(ಅ) ಅರ್ಥಪೂರ್ಣ (ಆ) ಪ್ರಮಾಣ (ಇ) ಜಟಕಾ ಹೊಡೆಯುವವ (ಈ) ನಟನೆಯೊಡನೆ

೬. **ಸಾಬೀತು**
(ಅ) ಮೋಸ (ಆ) ಹೆಪ್ಪುಗಟ್ಟಿದ (ಇ) ರುಜುವಾತಾದ (ಈ) ಸದ್ಗುಣ

೭. **ವಿತಂತು**
(ಅ) ಪರಕು (ಆ) ಗಂಡ ಸತ್ತವಳು (ಇ) ಬಿಟ್ಟೂಬಿಡದೆ (ಈ) ನಡುನಡುವೆ ಕಡಿದ

೮. **ವಿನಾಯತಿ**
(ಅ) ಗರುಡ (ಆ) ಗಣಪತಿಯ ಹೆಂಡತಿ (ಇ) ಗತಿಗೇಡಿ (ಈ) ಹೊರತುಪಡಿಸುವಿಕೆ

೯. **ಕೃತಿತ್ವ**
(ಅ) ಸಿಟ್ಟು (ಆ) ದೊಡ್ಡ ಕೆಲಸ ಸಾಧಿಸುವಿಕೆ (ಇ) ಉಪಾಯ (ಈ) ಷಣ್ಮುಖ

೧೦. **ಕೃತಾರ್ಥ**
(ಅ) ಕೆಲಸ ಪೂರೈಸಿದ (ಆ) ಪೂರ್ವ ಕರ್ಮ (ಇ) ಹಣ ಕೂಡಿಸುವುದು (ಈ) ಯಮ

೧೧. **ಹದಗುಟ್ಟು**
(ಅ) ಕಷ್ಟಪಡು (ಆ) ರಹಸ್ಯ (ಇ) ಪಾತಿವ್ರತ್ಯ (ಈ) ಹಂಗಿಸು

೧೨. **ಹದ್ದುಬಸ್ತು**
(ಅ) ಹದ್ದಿನ ಗೂಡು (ಆ) ಆಕಸ್ಮಿಕ ನಾಳೆ (ಇ) ಹತೋಟಿ (ಈ) ತಳಪಾಯ

## ‘ಶಬ್ದ ಭಾಂಡಾರ’ದ ಸರಿಯಾದ ಅರ್ಥಗಳು

೧. **ಅಷ್ಟಕ** (ನಾ) ಎಂಟರ ಗುಂಪು, ಎಂಟಂಶದ, ಎಂಟು ಪದ್ಯಗಳ ರಚನೆ. ಉದಾ:— ದುರ್ಗಾಷ್ಟಕ=ದುರ್ಗೆಯನ್ನು ಹೊಗಳುವ ಎಂಟು ಶ್ಲೋಕವುಳ್ಳ ರಚನೆ. [ಸಂ. ಅಷ್ಟ=ಎಂಟು]

೨. **ಅಶ್ಲೀಲ** (ಅ) ಅಸಭ್ಯ, ಸಂಭಾವಿತರಿಗೆ ಸಲ್ಲದ ಮಾತು ಅಥವಾ ವಿಷಯ. ಉದಾ:— ಅಶ್ಲೀಲ ಸಾಹಿತ್ಯ. [ಸಂ.]

೩. **ಖುದ್ದು** (ನಾ) ಸ್ವತಃ, ತಾನೇ, ತನ್ನದೇ ಆದ. ಉದಾ:— ಖುದ್ದಾಗಿ ಬಂದಿದ್ದ. [ಫಾರಸಿ – ಖುದ್]

೪. **ಕುದುವು** (ಅ) ಒತ್ತೆ, ಅಡವು, ಗಿರವಿ. ಉದಾ:— ಚಿನ್ನ ಕುದುವಿಟ್ಟು ಸಾಲ ತಂದ. [ದೇಶ್ಯ]

೫. **ಸಾಭಿಪ್ರಾಯ** (ಅ) ಅರ್ಥಪೂರ್ಣ, ಒಳಗಿನ ಅಭಿಪ್ರಾಯ ವ್ಯಕ್ತವಾಗುವಂಥ. ಉದಾ:— ಸಾಭಿಪ್ರಾಯವಾಗಿ ಕಣ್ಣು ಮಿಟುಕಿಸಿದಳು. [ಸಂ. ಸ=ಸಹಿತ+ಅಭಿಪ್ರಾಯ]

೬. **ಸಾಬೀತು** (ನಾ) ರುಜುವಾತಾದ, ಪ್ರಮಾಣವಾದ, ದೃಢಪಟ್ಟ. ಉದಾ:— ಅಪರಾಧ ಸಾಬೀತಾಗಲಿಲ್ಲ. [ಅರಬ್ಬಿ – ಸಾಬಿತ್=ದೃಢ, ನಿಶ್ಚಿತ]

೭. **ವಿತಂತು** (ಅ) ಗಂಡ ಸತ್ತವಳು, ವಿಧವೆ. ಉದಾ:— ವಿತಂತುವಾದ ಹೆಂಡತಿ. [ಸಂ. ವಿ= ಇಲ್ಲ+ತಂತು=ಎಳೆ=ಎಳೆ ಕಡಿದ]

೮. **ವಿನಾಯತಿ** (ಈ) ಹೊರತುಪಡಿಸುವಿಕೆ, ರಿಯಾಯಿತಿ. ಉದಾ:— ಕಾನೂನಿನಿಂದ ವಿನಾಯತಿ ಕೊಟ್ಟ. [ಸಂ. ವಿನಾ= ಹೊರತು ಎಂಬುದರಿಂದ ಉರ್ದೂ ಪ್ರಭಾವದಿಂದ ರೂಪಿಸಿದ ಪದ]

೯. **ಕೃತಿತ್ವ** (ಅ) ದೊಡ್ಡ ಕೆಲಸ ಸಾಧಿಸುವ ಶಕ್ತಿ, ಯೋಗ್ಯತೆ. ಉದಾ:— ಅವನ ಕೃತಿತ್ವ ನಿಸ್ಸಂದಿಗ್ಧ. [ಸಂ. ಕೃತಿನ್=ಕೆಲಸಗಾರ]

೧೦. **ಕೃತಾರ್ಥ** (ಅ) ಕೆಲಸ ಪೂರೈಸಿದವ, ಉದ್ದೇಶ ಸಾಧಿಸಿದ, ಧನ್ಯ. ಉದಾ:— ಬದುಕು ಕೃತಾರ್ಥವಾಯಿತು. [ಸಂ. ಕೃತ= ಮಾಡಿದ + ಅರ್ಥ= ಪ್ರಯೋಜನ]

೧೧. **ಹದಗುಟ್ಟು** (ಈ) ಹಂಗಿಸು. ಉದಾ:— ಅವನಿಗೆ ಕಷ್ಟ ಬಂದಾಗ ಹದಗುಟ್ಟಿದಳು. [ಕನ್ನಡ ಹದ=ಸರಿಯಾದದ್ದು+ಕಟ್ಟು=ಹೊಡೆ. ಆದದ್ದು ಸರಿಯಾಯಿತೆಂದು ಹೇಳು]

೧೨. **ಹದ್ದುಬಸ್ತು** (ನಾ) ಹತೋಟಿ, ನಿಯಂತ್ರಣ; ಮಿತಿ. ಉದಾ:— ಸಿಟ್ಟನ್ನು ಹದ್ದುಬಸ್ತಿನಲ್ಲಿ ಇಡಬೇಕು. [ಅರಬ್ಬಿ – ಹದ್= ಮೇರೆ + ಫಾರಸಿ – ಬಸ್ತ್= ಕಟ್ಟುವ ಬಟ್ಟೆ]

### ನಿಮ್ಮ ಶಬ್ದಶಕ್ತಿಯ ತರಗತಿ

ನೀವು ಎಷ್ಟು ಶಬ್ದಗಳಿಗೆ ಅರ್ಥ ಅರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.

೬—೮ ಸರಿಯಿದ್ದರೆ ... ಸಾಧಾರಣ
೯–೧೦ ,, ... ಉತ್ತಮ
೧೧–೧೨ ,, ... ಅತ್ಯುತ್ತಮ

**ಅಳಿಯುತ್ತಿರುವ**

**ಅಪರೂಪದ : ಜಲಚರ**



# ಕಡಲಾಮೆಗಳು

**ಎನ್. ವಾಸುದೇವ**

ಸರೀಸೃಪ, - ಹಾವು, ಹಲ್ಲಿ, ಮೊಸಳೆ, ಆಮೆ-ಅಥವುಗಳದು ಒಂದು ವಿಶಾಲ ಜೀವಿ ವರ್ಗ. ನೆಲ ಜಲಗಳಲ್ಲೆಲ್ಲಾ ಹರಡಿ, ಹಬ್ಬಿ, ಯಶಸ್ವೀ ಜೀವನ ನಡೆಸುತ್ತಿರುವ ಜೀವಿಗಳು ಇವು. "ಮಧ್ಯ ಜೀವಿ ಕಲ್ಪ"ದಲ್ಲಿ ಇಂದಿಗೆ 20 ಕೋಟಿ ವರ್ಷಗಳ ಹಿಂದೆ ಈ ಇಳೆಯಲ್ಲೇ ಬಾಳು ನಡೆಸಿ ಸಾರಾ ಸಗಟು ವಿನಾಶ ಹೊಂದಿದ ದೈತ್ಯ ಹಲ್ಲಿಗಳ ವಂಶಜರು ಇಂದಿನ ಸರೀಸೃಪಗಳು!

ಜಲವಾಸಕ್ಕೆ ಹೊಂದಿಕೊಂಡಿರುವ, ಹೊಂದಿಕೊಳ್ಳಬಲ್ಲ, ಸರೀಸೃಪಗಳಲ್ಲೆಲ್ಲ ಜಲದಲ್ಲೇ ಸ್ಥಿರ ನೆಲೆಯನ್ನುಳ್ಳವು ಕಡಲ ಆಮೆಗಳು. ಕಡಲಿನಲ್ಲಿ ಪ್ರಮಾದವಿಲ್ಲದ ಯಶಸ್ವಿನ ಬದುಕನ್ನು ನಡೆಸಲೆಂದೇ ಸೃಷ್ಟಿಗೊಂಡಿರುವ ಸರೀಸೃಪಗಳು ಇವು. ಕಡಲಾಮೆಗಳಿಗೆ ನಿಸರ್ಗ ನೀಡಿರುವ "ಅದ್ಭುತ ಬದುಕು ಸಾಧನಗಳು" ವಿಶೇಷವಾಗಿ ಜಲವಾಸಕ್ಕಾಗಿಯೇ ರೂಪಿಸಲ್ಪಟ್ಟಿವೆ. ತಮ್ಮ ಜೀವನವನ್ನೆಲ್ಲ ಸಾಗರದಲ್ಲೇ ಕಳೆದರೂ ಕಡಲಾಮೆಗಳು ಒಂದು ಕಾರಣಕ್ಕಾಗಿ ಮಾತ್ರ ನೆಲದ ಬಂಧನಕ್ಕೆ ಒಳಗಾಗಿವೆ.

ಎಲ್ಲ ಸರೀಸೃಪಗಳಿಗೆ ಅವು ಎಲ್ಲೇ ಬದುಕುತ್ತಿದ್ದರೂ ಸಾಮಾನ್ಯವಾಗಿರುವ ಒಂದು ಪ್ರಧಾನ ಜೈವಿಕ ಲಕ್ಷಣವಿದೆ: ಮೊಟ್ಟೆಯಿಟ್ಟು ಮರಿ ಮಾಡುವ ಸಂತಾನ ಕ್ರಮ. ಈ ಗುಣವೇ ಕಡಲಾಮೆಗಳ ನೆಲದ ನಂಟಿಗೆ ಕಾರಣ. ತಮ್ಮ ಸಂತಾನಾಭಿವೃದ್ಧಿಗೆ ಗೂಡನ್ನು ತೋಡಿ ಮೊಟ್ಟೆಗಳನ್ನಿ-ಡಲು ಈ ಆಮೆಗಳು ವರುಷಕ್ಕೊಮ್ಮೆ

ಕಡಲ ತಡಿಯನ್ನು, ಮರಳ ದಡವನ್ನು ಆಶ್ರಯಿಸಲೇಬೇಕು. ವಂಶಾಭಿವೃದ್ಧಿಯ ಈ ಕಾಲವೇ ಕಡಲ ಆಮೆಗಳಿಗೆ ಹಲವು ವಿಧಗಳಲ್ಲಿ ಕುತ್ತಿನ, ಬಹು ವಿಪತ್ತಿನ ಕಾಲವೂ ಆಗಿರುವುದು ಒಂದು ವಿಸ್ಮಯಕರ ವಿಪರ್ಯಾಸ!

೧೫೦೩ನೆಯ ವರ್ಷದಲ್ಲಿ ಕೊಲಂಬಸ್ ಕೆರಿಬಿಯನ್ ಸಮುದ್ರದಲ್ಲಿ ಯಾನ ಮಾಡುತ್ತಿದ್ದಾಗ ಹೊಸ ದ್ವೀಪಸಮೂಹವೊಂದನ್ನು ಕಂಡ. ಅಸಂಖ್ಯ ಹೆಬ್ಬಂಡೆಗಳಿಂದ ತುಂಬಿ ಹೋದಂತೆ ಕಂಡ ಆ ದ್ವೀಪಗಳು ತೀರ ನಿಜದಲ್ಲಿ ತುಂಬಿದ್ದುದು ದೈತ್ಯ ಕಡಲಾಮೆಗಳಿಂದ. ಸ್ಪೇನಿಶ್ ಭಾಷೆಯ ಕಡಲಾಮೆ ಎಂಬರ್ಥ ಕೊಡುವ ಟೋರ್ಟುಗಾಸ್ ಪದದಿಂದಲೇ ಈ ದ್ವೀಪಗಳನ್ನು ಕೊಲಂಬಸ್ ಹೆಸರಿಸಿದ. ಇಂದು ಕೇಮ್ಯಾನ್ ದ್ವೀಪಗಳು ಎಂದು ಕರೆಯಲ್ಪಡುತ್ತಿರುವ ಆ ದ್ವೀಪಗಳೇ ಇಂದಿಗೂ ಕಡಲಾಮೆ ಸಂತತಿಗಳ ವಾಸ ಕೇಂದ್ರಗಳಾಗಿವೆ.



“ಏನು, ಭಗವದ್ಗೀತೆ ಹೇಳೋ ಅಟ ಅಂದ್ರೆ! ನೀವು ಇದು ವರ್ಗೂ ಸಂಜಯ ಉವಾಚ ಅಂತ

ಪ್ರತಿ ವರ್ಷ ಜೂನ್–ಆಗಸ್ಟ್ ತಿಂಗಳುಗಳಲ್ಲಿ ಸಾವಿರಗಟ್ಟಲೆ ಸಂಖ್ಯೆಯಲ್ಲಿ ದೈತ್ಯ ಕಡಲಾಮೆಗಳು ಕೇಮ್ಯಾನ್ ದ್ವೀಪಗಳಿಂದ ವಲಸೆ ಹೊರಟು ನೂರಾರು ಮೈಲು ಈಜಿ ಹೋಗಿ ತಮ್ಮ ಸಂತಾನ ಕ್ಷೇತ್ರವಾದ ಟೋರ್ಟುಗುಯೆರೋವನ್ನು, ಅದು ಕೋಸ್ಟರಿಕಾದ ಪೂರ್ವ ತೀರದ ೨೨ ಮೈಲುದ್ದದ ಕರಿ ಮರಳ ಕಡಲ ತಡಿ ತಲುಪುತ್ತವೆ. ಹಲವಾರು ನೂರು ವರ್ಷಗಳಿಂದ ಜಗದಾದ್ಯಂತ ಜಿಹ್ವಾ ಚಾಪಲ್ಯವನ್ನು ತಣಿಸಲು ಬಲಿಯಾಗಿ ವಿನಾಶದ ಹಾದಿ ಹಿಡಿದಿರುವ ಕಡಲಾಮೆಗಳ ಅತಿ ಕಡೆಯ ಸಂತಾನ ಕ್ಷೇತ್ರ ಇದೊಂದೇ.

ಸಂತಾನ ಕಾಲದಲ್ಲಿ ಹೆಣ್ಣು ಕಡಲಾಮೆಗಳು ತಮ್ಮ ರಕ್ಷಣೆಯ ನೆಲೆಯಾದ ಕಡಲ ಒಡಲನ್ನು ಬಿಟ್ಟು, ಬಿರುಗಾಳಿ ಬಡಿವ ಮರಳ ದಡದತ್ತ ತಮ್ಮನ್ನೇ ತಾವು ಜಗ್ಗಿ ಎಳೆಯುತ್ತಾ 'ಆಮೆ ವೇಗ'ದಲ್ಲಿ ನಡೆದು ಬರುತ್ತವೆ. ಕಡಲಾಮೆಗಳದು ಬೃಹತ್ ಗಾತ್ರ. ಅದರಿಂದ ಅವು ಕಡಲಲ್ಲಿ ಪೂರ್ಣ ಶತ್ರುಮುಕ್ತ. ಆದರೆ ನೆಲದ ಮೇಲೆ ಪ್ರಾಕೃತಿಕ ರಕ್ಷಣೆ ಅವುಗಳಿಗಿಲ್ಲ. ಸ್ವರಕ್ಷಣೆಯೂ ಅವುಗಳಿಗೆ ಸಾಧ್ಯವಿಲ್ಲ. ಅಗಾಧ ಭೀಮಾಕಾರ, ರಕ್ಷಣಾ ತಂತ್ರ—ಅವುಗಳ ಸಾಧಾರಣ ತೂಕವೇ ೧೫೦ ಕಿಲೋ—ಇವೆಲ್ಲವನ್ನೂ ಪಡೆದಿದ್ದರೂ ತಮ್ಮ ಗಾತ್ರವನ್ನಾಗಲಿ ಬಲವನ್ನಾಗಲಿ ತಮ್ಮ ರಕ್ಷಣೆಗೇ ಬಳಸಿಕೊಳ್ಳಲು ಆಗದ ನಿಸ್ಸಹಾಯಕ ಸ್ಥಿತಿ ಕಡಲಾಮೆಗಳ ಜೀವನದಲ್ಲಿ ಇನ್ನೊಂದು ವಿಪರ್ಯಾಸ!

ಕಡಲಾಮೆಗಳ ಗೂಡು ಕಟ್ಟುವ ವಿಧಿಗಳು ಹುಣ್ಣಿಮೆಯ ರಾತ್ರಿಯಲ್ಲೇ ಆರಂಭವಾಗುತ್ತವೆ. ಇದಕ್ಕೆ ಕಾರಣವೇನಿರಬಹುದು? ಬೆಳದಿಂಗಳಿನ ಅನುಕೂಲವೇನಾದರೂ ಉಂಟೇ? ಹುಣ್ಣಿಮೆಯ ದಿನದಂದು ಕಡಲ ಭರತ ಅತಿ ಗರಿಷ್ಠ. ಕಡಲಿನ ಕಬಂಧ ಬಾಹುವಿನ ಪರಿಮಿತಿಯ ಹೊರಗೆ ಗೂಡನ್ನು ತೋಡುವುದು ಮೊಟ್ಟೆಗಳ ಉಳಿವಿಗೆ ಬಹು ಅವಶ್ಯಕ. ಕಾರಣ, ಕ್ಷಾರ ಜಲದಲ್ಲಿ ನೆನೆದ ಕಡಲಾಮೆ ಮೊಟ್ಟೆ

ಜೀವಶಾಸ್ತ್ರವೇ ಅಪಾದೆ. ಬಹುಸಂಖ್ಯೆಯಲ್ಲಿರುವ [illegible] ಪೀಡುವ ಅಥವಾ ಅವುಗಳನ್ನು ಎದುರಿಸಿಯೂ ಉಳಿದು ನಿಲ್ಲಲು ಸಾಧ್ಯವಾಗುವ ಸೂತ್ರವೊಂದನ್ನು ಕಡಲಾಮೆಗಳು ಕಂಡುಕೊಂಡಿವೆ. ಅವು ಒಮ್ಮೆಗೆ ನೂರು ಮೊಟ್ಟೆಗಳನ್ನಿಡುವುದು. ಈ ಸಂಖ್ಯೆ ಕಡಿಮೆಯಾದರೆ ಶತ್ರುಗಳದೇ ಮೇಲುಗೈ; ಹೆಚ್ಚಾದರೆ ಅವುಗಳನ್ನು ಉತ್ಪಾದಿಸಿ ಹೊತ್ತು ಸಾಗುವ ಕೆಲಸಗಳು ದುಸ್ಸಾಧ್ಯ!!

ಮೊಟ್ಟೆಯಿಂದ ಹೊರಬಂದು ಗೂಡಿನಿಂದ ಕಡಲತ್ತ ನಡೆಯುವ ಮರಿ ಆಮೆಗಳ ವಿರುದ್ಧ ಇಡೀ ಪ್ರಪಂಚವೇ ವಿನಾಶದ ಕತ್ತಿ ಮಸೆಯುವಂತೆ ಕಾಣುತ್ತದೆ. ಆಮೆ ತತ್ತಿಗಳನ್ನೇ ಕದ್ದೊಯ್ದು ಭಕ್ಷಿಸುವ ಶತ್ರುಗಳಿಗೂ ಕೊರತೆ ಇಲ್ಲ– ಇರುವೆ, ನಳ್ಳಿಗಳಿಂದ ಹಿಡಿದು ಕರಡಿ, ಹುಲಿಗಳವರೆಗೆ ಹದ್ದುಗಳು ನಾಯಿಗಳು ಮರಿಗಳಿಗೆ ಮಹಾ ವೈರಿಗಳು. ತಾಯಿ ಆಮೆ ಇನ್ನೂ ಮೊಟ್ಟೆಯಿಡುತ್ತಿರುವಾಗಲೇ ಕದ್ದು ಸಾಗಿಸುತ್ತಿರುವುದರಿಂದ ಆರಂಭಿಸಿ ಒಂದೆರಡು ದಿನಗಳವರೆಗೂ ಮೊಟ್ಟೆಗಳ್ಳರದು ಪ್ರಬಲ ತೊಂದರೆ. ಆದರೆ ನಂತರ ತತ್ತಿಗಳು ಮರಿಗಳಾಗುವವರೆಗೆ – ಸುಮಾರು ಅರವತ್ತು ದಿನಗಳ ಕಾಲ – ಗೂಡಿನಲ್ಲಿ ಪರಿಸ್ಥಿತಿ ಶಾಂತ.

ಮರಳಲ್ಲಿ ಗೂಡನ್ನು ತೋಡಿ ಮೊಟ್ಟೆಗಳನ್ನಿಟ್ಟು ಮುಚ್ಚಿ ಕಡಲಿಗೆ ಆದಷ್ಟು ಬೇಗ ಹಿಂದಿರುಗಿಬಿಡುವುದಷ್ಟೇ 'ತಾಯಿ' ಯ ಕೆಲಸ. ತನ್ನ ಮೊಟ್ಟೆ ಮರಿಗಳ ಬಗೆಗೆ ಯಾವುದೇ ಕಾಳಜಿ ಕಡಲಾಮೆಗಳಿಗಿಲ್ಲ. ಕಾವಲು ನಿಂತು ರಕ್ಷಿಸುವ ಕ್ರಮವನ್ನು ಅವು ಇಟ್ಟಿಲ್ಲ. ಆಳ ಮರಳ ಹೊಂಡದಲ್ಲಿ ನಾಥರಿಲ್ಲದೆ ಉಳಿವ ಮೊಟ್ಟೆ ಗಳಿಂದ ತುಂಬಿರುವ ದಾರಿಗಳು ಸರಿ ಸಮಯ ದಲ್ಲಿ ತಾವೇ ಗೂಡಿಂದಲೂ ಹೊರಬಂದು ಕಡಲನ್ನು ಪ್ರವೇಶಿಸಬೇಕಷ್ಟೆ!

ಕಡಲಾಮೆ ಮರಿಗಳು – ದೊಡ್ಡ ನಾಣ್ಯ ದಷ್ಟೇ ಗಾತ್ರ ಅವುಗಳದು – ಗೂಡಿನಿಂದ ರಾಶಿ ರಾಶಿಯಾಗಿ ಚಿಮ್ಮಿದಂತೆ ಹೊರಹೊಮ್ಮುತ್ತವೆ! ಸಾಮಾನ್ಯವಾಗಿ ಕಡಲ ಉಬ್ಬರದ ದಿನಗಳಲ್ಲೇ, ಯಾವಾಗಲೂ ಮಧ್ಯ ರಾತ್ರಿಯ ನಂತರವೇ ಹೊರಬಂದು ಗಾಬರಿಯ ಹೆಜ್ಜೆಗಳನ್ನಿಡುತ್ತಾ, ಸಾಲುಗಟ್ಟಿ ತಮ್ಮ ಮುಂದಿನ ನೆಲೆಯಾದ ನೀರಿನತ್ತ ಪಯಣ ಹೊರಡುವ ಈ ಆಮೆ ಮರಿಗಳಿಗೆ ಅವುಗಳ ಹುಟ್ಟರಿವೇ ಮೂಲ ಬಲ. ಮಾರ್ಗದರ್ಶಿ. ಹ್ರಸ್ವ ಪಯಣ ಇದಾದರೂ ಎಲ್ಲ ದೃಷ್ಟಿಯಲ್ಲೂ ಅತಿ ನಿಧಾನದ, ಅತಿ ಅಪಾಯದ, ಆದರೆ ಅತಿ ಮುಖ್ಯ ಪಯಣವಿದು: ಈ ಪಯಣಿಗರಿಗಾಗಿಯೇ ಕಾದು ನಿಂತ ಹಲವಾರು ಚಿಕ್ಕ–ದೊಡ್ಡ ಶತ್ರುಗಳಿಗೆ ಬಲಿಯಾಗಿ ಉಳಿದ ಕೆಲವೇ ಅದೃಷ್ಟಶಾಲಿಗಳು ಮಾತ್ರ ತಮ್ಮ ನೆಲೆಯಾದ ಕಡಲನ್ನು ಸೇರುತ್ತವೆ.

ನೆಲದ ಮೇಲಣ ಈ ವಿಪತ್ಕಾರೀ ಕಾಲದಲ್ಲಿನ ಆಪತ್ತುಗಳು ನೈಸರ್ಗಿಕವಾಗಿದ್ದಷ್ಟು ಕಾಲ ಚಿರತೆ–ಸಿಂಹಗಳಂಥವುಗಳು ವಯಸ್ಕ ಆಮೆಗಳಿಗೆ, ಕಡಲ ಕಾಗೆಗಳು, ಹದ್ದುಗಳು ಅಂಥವು ಮರಿಗಳಿಗೆ ಕಡಲಾಮೆಗಳ ಜನಸಂಖ್ಯೆ ಅಳಿವ ಭಯ ಕಂಡಿರಲಿಲ್ಲ. ಆದರೆ ಮಾನುಷ್ಯನ ಅತಿ ದುರಾಸೆಯ ಕೈಗಳು ಅವುಗಳತ್ತ ತಿರುಗಿದಂದಿನಿಂದ ಕಡಲಾಮೆಗಳ ವಂಶವೇ ಅಳಿವ ಹಾದಿ ಹಿಡಿದಿದೆ. ★



* ವಿವಾಹವೆಂದರೆ ಯೌವನದಲ್ಲಿ ಸಂಭವಿಸುವ ತಪ್ಪು. ಈ ತಪ್ಪನ್ನು ಎಲ್ಲರೂ ಮಾಡಬೇಕಾದದ್ದೆ.

* ವಿವಾಹಿತರು ಅವಿವಾಹಿತರಿಗಿಂತ ಹೆಚ್ಚು ಕಾಲ ಬದುಕುತ್ತಾರಂತೆ. ತಾವು ಬದುಕಿದ್ದು ಬಹಳವಾಯಿತು ಎಂಬ ಅನುಭವ ಬರುವುದೇ ಬಹುಶಃ ಇದಕ್ಕೆ ಕಾರಣವಾಗಿರಬೇಕು. —ಡಾನ್ ಹೆರಾಲ್

# ಬಿಳಿದೊರೆಯ ನ್ಯಾಯ ತೀರ್ಮಾನ

ಮೂಲ: **ಜಿಮ್ ಕಾರ್ಬೆಟ್**
ಕನ್ನಡಕ್ಕೆ: **'ರೇಣುಕ'**

ಮೂವತ್ತರ ದಶಕದಲ್ಲಿ ಸರ್ ಫ್ರೆಡರಿಕ್ ಆ್ಯಂಡರ್ಸನ್ನರು ಕುಮಾವ್ (ಈಗಿನ ಉತ್ತರ ಪ್ರದೇಶದ ತೆಹರಿ ಗಢವಾಲ್ ಜಿಲ್ಲೆ) ಗುಡ್ಡಗಾಡು ಪ್ರದೇಶದಲ್ಲಿ ಟೆಹರ್ ಮತ್ತು ಗಿರ್ ಸಂಸ್ಥಾನಕ್ಕೆ ಸೇರಿದ ಆಸ್ತಿಪಾಸ್ತಿಗಳ ಮೇಲ್ವಿಚಾರಣಾಧಿಕಾರಿಯಾಗಿದ್ದರು. ಗುಡ್ಡಗಾಡಿನ ಜನರೊಂದಿಗೆ ಸುಲಭವಾಗಿ ಬೆರೆತು ಅವರ ನೋವು ನಲಿವುಗಳನ್ನು ಅರಿಯುತ್ತಿದ್ದರು. ವ್ಯಾಪಕವಾದ ಅಧಿಕಾರವನ್ನು ಹೊಂದಿದ್ದ ಅವರು ಕ್ಲಿಷ್ಟವಾದ ಅನೇಕ ವಿವಾದಗಳನ್ನು ಸ್ಥಳದಲ್ಲಿಯೇ ಬಗೆಹರಿಸಿ ನ್ಯಾಯ ತೀರ್ಮಾನ ಮಾಡುತ್ತಿದ್ದರು.

ವಾದಿ ಪ್ರತಿವಾದಿಗಳಿಬ್ಬರಿಗೂ ಅವರ ತೀರ್ಮಾನ ಸಮ್ಮತವಾಗಿರುತ್ತಿದುದೊಂದು ವಿಶೇಷ! ಅವರು ವಿವಾದವನ್ನು ಇತ್ಯರ್ಥಪಡಿಸುವಾಗ ನಿಷ್ಪಕ್ಷಪಾತವಾಗಿ ಯಾರಿಗೂ ಅನ್ಯಾಯವಾಗದಂತೆ ಎಚ್ಚರಿಕೆ ವಹಿಸಿ ತೀರ್ಮಾನ ಮಾಡುತ್ತಿದ್ದರು. ಆ ಕಾಲದಲ್ಲಿ ಕೋರ್ಟು ಕಚೇರಿಗಳಿಗೆ ಎಡತಾಕುವ ಪರಿಪಾಠ ಜನರಲ್ಲಿರಲಿಲ್ಲ.

ಮಾಗಿಯ ಕಾಲದಲ್ಲೊಂದು ದಿನ ಆ್ಯಂಡರ್ಸನ್ನರು ನನ್ನೊಂದಿಗೆ ಬಕ್ಸರ್ ಎಂಬ ಗುಡ್ಡಗಾಡಿನ ಹಳ್ಳಿಯೊಂದರ ಬಳಿ ಬೀಡುಬಿಟ್ಟಿದ್ದರು. ಆ ದಿನ ಸಾಯಂಕಾಲ ಎರಡು ಗ್ರಾಮಗಳ ಜನರು ವಿವಾದವೊಂದರ ಇತ್ಯರ್ಥಕ್ಕಾಗಿ ಆ್ಯಂಡರ್ಸನ್ನರ ಬಳಿ ಬಂದರು. ದೊಡ್ಡ ಮಾವೊಂದರ ನೆರಳಿನ ವಿಸ್ತಾರದಲ್ಲಿ ಕುಳಿತಿದ್ದ ಹಳ್ಳಿಗರ ನಡುವೆ ಶಿಥಿಲವಾದ ಕುರ್ಚಿಯೊಂದರ ಮೇಲೆ ಕುಳಿತು ಆ್ಯಂಡರ್ಸನ್ನರು ವಿಚಾರಣೆಯನ್ನು ಆರಂಭಿಸಿದರು.

ಮೊದಲು ಬಕ್ಸರ್ ಹಳ್ಳಿಗೆ ಅನತಿದೂರದಲ್ಲಿ ತಗ್ಗಿನಲ್ಲಿದ್ದ ಹಳ್ಳಿಯ ಮುಖ್ಯಸ್ಥ ತನ್ನ ಅಹವಾಲನ್ನು ಮುಂದಿಟ್ಟ. ಬಕ್ಸರ್ ಹಳ್ಳಿಯ ಕಡೆಯಿಂದ ಕಾಲುವೆಯೊಂದು ತಗ್ಗಿನ ಹಳ್ಳಿಯ ಗದ್ದೆಗಳ ನಡುವೆ ಹರಿದುಹೋಗುತ್ತಿತ್ತು. ಕಾಲುವೆಯ ನೀರನ್ನು ಎರಡೂ ಹಳ್ಳಿಯವರು ತಮ್ಮ ಗದ್ದೆಗಳಿಗೆ ಉಪಯೋಗಿಸಿಕೊಂಡು ಬತ್ತ ಬೆಳೆಯುತ್ತಿದ್ದರು. ಇದು ಇಬ್ಬಣದ ಹಳ್ಳಿಗಳಿಗೆ ನಡುವೆ ಅನೂಚಾನವಾಗಿ ನಡೆದು ಬಂದ ರೀತಿ ರಿವಾಜು. ಆದರೆ ಆ ವರ್ಷ ಮುಂಗಾರು ಮಳೆ ಕೈಕೊಟ್ಟಿತು. ಕಾಲುವೆಯಲ್ಲಿ ಹರಿಯುವ ನೀರು ಕಮ್ಮಿಯಾಯಿತು. ಬಕ್ಸರ್ ಹಳ್ಳಿಯವರು ಕಾಲುವೆಯ ನೀರೆಲ್ಲವನ್ನೂ ತಾವೇ ಬಳಸಿಕೊಂಡರು. ಕೆಳಗಿನ ಹಳ್ಳಿಯ ಗದ್ದೆಗಳಿಗೆ ನೀರನ್ನು ಬಿಡಲಿಲ್ಲ. ಇದರಿಂದ ನೀರಿಲ್ಲದೆ ಕೆಳಗಿನ ಹಳ್ಳಿಯ ಗದ್ದೆ ಫಸಲು ಒಣಗಿ ಹಾಳಾಯಿತು. ಹಾಳಾದ ಬೆಳೆಗೆ ಪರಿಹಾರವನ್ನು ಕೋರಿ ಕೆಳಗಿನ ಹಳ್ಳಿಯ ಮುಖ್ಯಸ್ಥ ಆ್ಯಂಡರ್ಸನ್ ದೊರೆಗಳ ಮುಂದೆ ತನ್ನ ಕೋರಿಕೆಯನ್ನು ಮಂಡಿಸಿದ.

ಬಕ್ಸರ್ ಹಳ್ಳಿಯ ಮುಖ್ಯಸ್ಥ ಕಾಲುವೆಯ ನೀರನ್ನು ಕೆಳಗಿನ ಹಳ್ಳಿಯವರ ಗದ್ದೆಗಳಿಗೆ ಬಿಡದೆ ತಮ್ಮ ಗದ್ದೆಯ ಬೇಸಾಯಕ್ಕೇ ಉಪ

(MY INDIA ಗ್ರಂಥದಿಂದ)

ಆ್ಯಂಡರ್‌ಸನ್ನರು "ತಿಳನಿ ಬಂದಿದ್ದಾಳೆಯೆ?" ಎಂದು ಕೇಳಿದರು. ಜನರ ನಡುವಿನಿಂದ ಆಕರ್ಷಕಳಾದ ಬಳ್ಳಿಯಂತೆ ಬಳುಕುವ ತೆಳ್ಳಗಿನ ನೀಟಾದ ಹುಡುಗಿಯೊಬ್ಬಳು ಎದ್ದು ಬಂದು ತಲೆ ತಗ್ಗಿಸಿಕೊಂಡು ನಿಂತಳು. ಟರ್ಕಾಯಿಸ್ ಗುಡ್ಡಗಾಡಿನ ಹೆಣ್ಣುಗಳಂತೆ ಅವಳು ತಲೆಗೂದಲನ್ನು ಓರಣವಾಗಿ ಹಿಂದಕ್ಕೆ ಬಾಚಿಕೊಂಡು ಗಂಟು ಹಾಕಿಕೊಂಡಿದ್ದಳು. ಬಿಳಿಯ ಅಂಚಿನ ಕಪ್ಪು ಸೀರೆಯನ್ನೂ ಕೆಂಪು ಬಣ್ಣದ ಕುಪ್ಪಸವನ್ನೂ ತೊಟ್ಟಿದ್ದ ಅವಳ ವಯಸ್ಸು ಹದಿನೆಂಟು ದಾಟಿದಂತೆ ಕಾಣುತ್ತಿರಲಿಲ್ಲ.

ಬಗ್ಗಿಸಿದ ತಲೆಯನ್ನು ಮೇಲೆತ್ತಿ, "ನಾನೇ ತಿಳನಿ. ದೊರೆಗಳಿಗೆ ನನ್ನಿಂದ ಏನಾಗಬೇಕು?" ಧೈರ್ಯದಿಂದ ಆ್ಯಂಡರ್‌ಸನ್ನರನ್ನೇ ಪ್ರಶ್ನಿಸಿದಳು. ನೆರೆದಿದ್ದ ಜನರೆಲ್ಲ ಅವಳ ಧಾರ್ಷ್ಟ್ಯಕ್ಕೆ ಬೆರಗಾಗಿ ಸದ್ದಿಲ್ಲದೆ ಉಸಿರು ಬಿಗಿ ಹಿಡಿದು ಕುಳಿತರು. ಆ್ಯಂಡರ್‌ಸನ್ನರು ಅಡಿಯಿಂದ ಮುಡಿಯವರೆಗೂ ಒಂದು ಸಲ ಹುಡುಗಿಯನ್ನು ನೋಡಿದರು.

"ನಿನ್ನ ಗಂಡ ಚಾಡುವನ್ನು ಬಿಟ್ಟು ಕಾಳುವಿನ ಬಳಿಗೆ ಏಕೆ ಹೋದೆ?" ಆ್ಯಂಡರ್‌ಸನ್ನರು ತಿಳನಿಯನ್ನು ಪ್ರಶ್ನಿಸಿದರು. ಪಕ್ಕದಲ್ಲಿ ಕೈಕಟ್ಟಿ ನಿಂತಿದ್ದ ಚಾಡುವಿನ ಕಡೆ ಕೈತೋರಿಸುತ್ತಾ ಆಕೆ, "ಆತನನ್ನು ನೋಡಿ; ಎಷ್ಟು ಕೊಳಕಾಗಿದ್ದಾನೆ! ಮಹಾ ಜಿಪುಣ. ಈತನೊಂದಿಗೆ ನನ್ನ ಮದುವೆಯಾಗಿ ಎರಡು ವರ್ಷಗಳಾದವು. ಅಂದಿನಿಂದ ಇಂದಿನವರೆಗೂ ಉಡಲು ಒಂದು ನೂಲಿನ ಸೀರೆಯನ್ನಾಗಲಿ ತೊಡಲು ಹಿತ್ತಾಳೆಯ ಒಡವೆಯನ್ನಾಗಲಿ ತೆಗೆದು ಕೊಟ್ಟಿಲ್ಲ, ಗಂಡನೆಂಬ ಈ ಪ್ರಾಣಿ. ಉಟ್ಟಿರುವ ಈ ಸೀರೆ ತೊಟ್ಟಿರುವ ಈ ಬೆಳ್ಳಿಯ ಬಳೆ, ಗಾಜಿನ ಮಣಿಸರ ಕಾಳುವೇ ನನಗೆ ಕೊಡಿಸಿದ್ದು." ತಿಳನಿ ಅರಳು ಹುರಿದಂತೆ ಮಾತನಾಡಿದಳು.

"ಚಾಡುವಿನ ಬಳಿ ತಿರುಗಿ ಹೋಗಿ ಸಂಸಾರ ಮಾಡಲು ಇಚ್ಛಿಸುತ್ತೀಯಾ?" ಆ್ಯಂಡರ್‌ಸನ್ನರು ಕೇಳಿದರು.

"ನಾನು ಕಾಳುವಿನೊಂದಿಗೇ ಇರುವಾಕೆ," ತಿಳನಿ ತಕ್ಷಣ ನುಡಿದಳು.

ಅನಂತರ ಆ್ಯಂಡರ್‌ಸನ್ನರು ತಲೆ ಬಾಗಿಸಿಕೊಂಡು ನಿಂತಿದ್ದ ಚಾಡುವಿನತ್ತ ತಿರುಗಿ, "ಏನಪ್ಪ ಚಾಡು, ಕಾಳು ತಿಳನಿ ಹೇಳಿದುದೆಲ್ಲವನ್ನೂ ಕೇಳಿದೆಯಲ್ಲಾ! ಏನಾದರೂ ಹೇಳುವುದಿದೆಯೆ?" ಎಂದು ಕೇಳಿದರು.

ಚಾಡು ಗದ್ಗದಿತನಾಗಿ, "ದೊರೆ, ನೀವೇ ನನ್ನ ತಾಯಿ ತಂದೆ. ನ್ಯಾಯಕ್ಕಾಗಿ ನಿಮ್ಮ ಬಳಿ ಸೆರಗೊಡ್ಡಿ ನಿಂತಿದ್ದೇನೆ. ನನ್ನ ಹೆಂಡತಿ ತಿಳನಿಯನ್ನು



ನನಗೆ ಹಿಂದಿರುಗಿಸಿ ಕೊಡಲು ಸಾಧ್ಯವಾಗದಿದ್ದಲ್ಲಿ ಪರಿಹಾರವನ್ನಾದರೂ ಕೊಡಿಸಿ," ಎಂದು ಕೈ ಮುಗಿದು ಬೇಡಿಕೊಂಡ.

"ಎಷ್ಟು ಪರಿಹಾರ ಕೊಡಬೇಕಪ್ಪ ಚಾಡು?" ಆ್ಯಂಡರ್‌ಸನ್ನರು ಕೇಳಿದರು.

"ನೂರಾ ಐವತ್ತು ರೂಪಾಯಿಗಳನ್ನು ಕೊಡಿಸಿ ದೊರೆ," ಚಾಡು ನುಡಿದ.

ಕುಳಿತಿದ್ದ ಜನರ ನಡುವೆ ಗುಸುಗುಸು ಪ್ರಾರಂಭವಾಯಿತು.

"ಚಾಡು ಹೆಚ್ಚು ಹಣ ಕೇಳುತ್ತಿದ್ದಾನೆ," ಒಬ್ಬನೆಂದ.

"ಹೌದು. ಬಹಳ ಜಾಸ್ತಿಯಾಯಿತು." ಮತ್ತೊಬ್ಬನೆಂದ.

"ಚಾಡು ಕೇಳುತ್ತಿರುವ ಪರಿಹಾರಧನವನ್ನು ಕೊಡಲು ಸಾಧ್ಯವೇ?" ಆ್ಯಂಡರ್‌ಸನ್ನರು ಕಾಳುವನ್ನು ಕೇಳಿದರು. "ಚಾಡು ಕೇಳುತ್ತಿರುವ ಪರಿಹಾರದ ಮೊತ್ತ ಹೆಚ್ಚಾಯಿತು. ತಿಳನಿಯನ್ನು ಅವನು ಮದುವೆಯಾದಾಗ ಅವಳ ತಂದೆಗೆ ನೂರು ರೂಪಾಯಿ ತೆರ ಕೊಟ್ಟಿರುವ ವಿಷಯ ಬಕ್ಸರ್ ಹಳ್ಳಿಯವರಿಗೆಲ್ಲಾ ಗೊತ್ತು. ಅದೂ ಅಲ್ಲದೆ ಆಗ ತಿಳನಿ ಹೊಸಬಿಯಾಗಿದ್ದಳು. ಅದಕ್ಕೆಂದೇ ಚಾಡು ನೂರು ರೂಪಾಯಿ ತೆರ ತೆತ್ತದ್ದು. ಚಾಡು ತಿಳನಿಯನ್ನು ಮದುವೆಯಾಗಿ ಆಗಲೇ ಎರಡು ವರ್ಷಗಳಾಗಿವೆ. ತಿಳನಿ ಈಗ ಆದೇ ಹೊಸ ಹೊಸಬಿಯಾದ ಹೆಣ್ಣಾಗಿಲ್ಲ. ಆದ್ದರಿಂದ ನಾನು ಐವತ್ತು ರೂಪಾಯಿಗಳನ್ನು ಮಾತ್ರ ಕೊಡಬಲ್ಲೆ," ಎಂದ ಕಾಳು.

ನೆರೆದಿದ್ದ ಜನರಲ್ಲಿ ಕೆಲವರು ಚಾಡುವಿನ ಪರ ಮತ್ತೆ ಕೆಲವರು ಕಾಳುವಿನ ಪರ ವಹಿಸಿಕೊಂಡು ವಾದಿಸತೊಡಗಿದರು. ಕೆಲವರಿಗೆ ಚಾಡು ಕೇಳಿದ ಪರಿಹಾರದ ಮೊತ್ತ ಅಧಿಕವೆನಿಸಿತು. ಮತ್ತೆ ಕೆಲವರು ಕಾಳು ಕೊಡಲೊಪ್ಪಿದ ಮೊತ್ತ ತೀರ ಕಮ್ಮಿಯಾಯಿತೆಂದು ಗೊಣಗಿಕೊಂಡರು. ತಿಳನಿ ಮಾತ್ರ ತನ್ನ ಬೆಲೆ ಕಟ್ಟುತ್ತಿದ್ದ ಜನರ ಮಾತು–ಕತೆಗಳನ್ನು ಕೇಳಿಸಿಕೊಂಡರೂ ಕೇಳಿಸಿಕೊಳ್ಳದವಳಂತೆ ನಿರ್ಲಿಪ್ತಳಾಗಿ ತುಟಿಯಂಚಿನಲ್ಲಿ ಕಿರುನಗೆಯನ್ನು ಸೂಸುತ್ತಾ, ಎತ್ತಲೋ ನೋಡುತ್ತಾ, ಕುಳಿತಿದ್ದಳು.

ಕೊನೆಗೆ ಆ್ಯಂಡರ್‌ಸನ್ನರು ಪರಿಹಾರದ ಮೊತ್ತ ಎಪ್ಪತ್ತೈದು ರೂಪಾಯಿಗಳೆಂದು ನಿರ್ಧರಿಸಿ ಕಾಳು ಅದನ್ನು ಕೊಡುವಂತೆ ತೀರ್ಮಾನ ಮಾಡಿದರು. ಒಡನೆ ಕಾಳು ನಡುವಿನಲ್ಲಿ ಸಿಕ್ಕಿಸಿಕೊಂಡಿದ್ದ ಸಂಚಿಯನ್ನು ಹೊರತೆಗೆದು ಬಿಚ್ಚಿ ಅದರಲ್ಲಿದ್ದುದನ್ನು ಆ್ಯಂಡರ್‌ಸನ್ನರ ಕಾಲಿನ ಬಳಿ ಝಣಝಣನೆ ಸುರಿದು ಖಾಲಿ ಮಾಡಿದ. ಹಣವನ್ನೆಣಿಸಿದಾಗ ಐವತ್ತೆರಡು ಬೆಳ್ಳಿಯ ರೂಪಾಯಿಗಳಿದ್ದವು. ಕಮ್ಮಿ ಬಿದ್ದ ಇಪ್ಪತ್ತುಮೂರು ರೂಪಾಯಿಗಳನ್ನು ಕಾಳುವಿನ ಸ್ನೇಹಿತರಿಬ್ಬರು ತುಂಬಿದರು. ಚಾಡುವಿಗೆ ಹಣವನ್ನೆಣಿಸಿಕೊಳ್ಳುವಂತೆ ಆ್ಯಂಡರ್‌ಸನ್ನರು ಹೇಳಿದರು. ಚಾಡು ಕೆಳಗೆ ಸುರಿದಿದ್ದ ಬೆಳ್ಳಿಯ ರೂಪಾಯಿಗಳನ್ನು ಎಣಿಸಿಕೊಂಡು ಪಂಚೆಯ ಚುಂಗಿನಲ್ಲಿಟ್ಟು ಗಂಟು ಕಟ್ಟಿ, ಸರಿಯಾಗಿದೆಯೆಂದು ಹೇಳಿದ.

ಈ ಮೇಲಿನ ಪ್ರಕರಣದ ವಿಚಾರಣೆಯಾಗುತ್ತಿರುವಾಗ ಬಕ್ಸರ್ ಹಳ್ಳಿಯ ಕಡೆಯಿಂದ ಹೆಂಗಸೊಬ್ಬಳು ವಿಚಾರಣೆ ನಡೆಯುತ್ತಿದ್ದ ಸ್ಥಳದೆಡೆಗೆ ಕಾಲೆಳೆಯುತ್ತಾ ಬಂದವಳೇ ತುಸು ಅಂತರದಲ್ಲಿ ಕುಳಿತುಕೊಂಡು, ಆ್ಯಂಡರ್‌ಸನ್ನರನ್ನು ಕುರಿತು, "ನನ್ನ ವಿಚಾರ ಏನು ಮಾಡಿದಿರಿ ದೊರೆ?" ಎಂದು ಕೇಳಿದಳು.

ಆ್ಯಂಡರ್‌ಸನ್ನರು ಆಕೆಯನ್ನು ಕುರಿತು "ಯಾರಮ್ಮಾ ನೀನು?" ಎಂದು ಕೇಳಿದರು.

"ಕಾಳುವಿನ ಹೆಂಡತಿ ದೊರೆ," ಎಂದು ಆ ಹೆಂಗಸು, ನಿರ್ಲಿಪ್ತಳಾಗಿ ನುಡಿದಾಗ ಆ್ಯಂಡರ್–ಸನ್ನರಿಗೆ ತಬ್ಬಿಬ್ಬಾಯಿತು. ಇದಕ್ಕೆ ಮೊದಲು ಕಾಳುವಿಗೆ ಹೆಂಡತಿಯೊಬ್ಬಳಿರುವ ಸಂಗತಿಯೇ ಅವರಿಗೆ ತಿಳಿದಿರಲಿಲ್ಲ.

ಆಕೆ ಎತ್ತರವಾಗಿ ತೆಳುವಾಗಿದ್ದಳು. ಗೌರ ವರ್ಣದ ಮೈಕಾಂತಿಯುಳ್ಳ ಆಕೆಯ ಮುಖ ರಕ್ತ ಹೀನತೆಯಿಂದ ಬಿಳಿಚಿಕೊಂಡಿತ್ತು. ಆಕೆಯ ಪಾದಗಳು ಯಾವುದೋ ರೋಗದಿಂದಾಗಿ ಊದಿಕೊಂಡಿದ್ದವು. ಟರಾಯ್ ಗುಡ್ಡಗಾಡಿನ ಜನರಿಗೆ ದತ್ತವಾಗಿ ಬಂದ ಮಲೇರಿಯದ ಪಿಡುಗಿ

ನಿಂದಾಗಿ ಬಳಲುತ್ತಿರುವುಳೆಂಬುದು ಆಕೆಯನ್ನು ಕಂಡೊಡನೇ ತಿಳಿಯುತ್ತಿತ್ತು.

ಆಯಾಸದಿಂದ ಉಬ್ಬಸಪಡುತ್ತಿದ್ದ ಆಕೆ ಕ್ಷೀಣವಾದ ದನಿಯಲ್ಲಿ, "ಕಾಳು ಮತ್ತೊಬ್ಬ ಹೆಂಡತಿಯನ್ನು ಕೊಂಡುಕೊಂಡಿದ್ದಾಯಿತು. ನನಗಾದರೋ ಬಂಧು ಬಳಗ ಯಾರೂ ಇಲ್ಲ. ದುಡಿದು ಉಣ್ಣಲು ಮೈಯಲ್ಲಿ ತ್ರಾಣವಿಲ್ಲ. ಹೊಟ್ಟೆಗಿಲ್ಲದೆ ಅನಾಥಳಾಗಿ ಸಾಯಬೇಕೆಂದು ನನ್ನ ಹಣೆಯಲ್ಲಿ ಬರೆದಿದ್ದರೆ ಯಾರೇನು ಮಾಡಬಹುದಿತ್ತು?" ಎಂದು ಹೇಳಿ ಸೀರೆಯ ಸೆರಗಿನಲ್ಲಿ ಮುಖವನ್ನು ಹುದುಗಿಸಿಕೊಂಡು ಬಿಕ್ಕಿ ಬಿಕ್ಕಿ ಅಳ ತೊಡಗಿದಳು.

ವಿವಾದ ಸುಲಲಿತವಾಗಿ ಇತ್ಯರ್ಥವಾಯಿತೆನ್ನುವುದರಲ್ಲಿ ಅನಿರೀಕ್ಷಿತವಾಗಿ ಎದುರಾದ ತಿರುವಿನಿಂದಾಗಿ ಆ್ಯಂಡರ್‌ಸನ್ನರಿಗೆ ಏನು ಮಾಡಬೇಕೆಂದೇ ತೋಚದಂತಾಯಿತು. ವಿಚಾರಣೆ ನಡೆಯುವಾಗ ಕಾಳುವಿಗೊಬ್ಬಳು ಹೆಂಡತಿ ಇರುವ ಸುಳಿವನ್ನು ಯಾರೂ ನೀಡಿರಲಿಲ್ಲ. ಅದು ಅಷ್ಟು ಅವಶ್ಯವೆಂದು ಯಾರಿಗೂ ತೋರಿರಲಿಲ್ಲವೋ ಏನೋ!

ಇದ್ದಕ್ಕಿದ್ದ ಹಾಗೆ ಉಸಿರು ಕಟ್ಟುವ ಮೌನ ಆವರಿಸಿತು. ಮಧ್ಯೆ ಮಧ್ಯೆ ಹೆಂಗಸಿನ ಬಿಕ್ಕುವಿಕೆ ನೆರೆದಿದ್ದ ಜನರ ಮನವನ್ನು ಕಲಕುತ್ತಿತ್ತು. ಆ್ಯಂಡರ್‌ಸನ್ನರು ತಲೆ ಕೆರೆದುಕೊಳ್ಳತೊಡಗಿದಂತೆ ನಾಟಕೀಯ ಘಟನೆಯೊಂದು ಜರುಗಿ ನೆರೆದಿದ್ದ ಜನರಿಗೆಲ್ಲಾ ಅಚ್ಚರಿಯುಂಟಾಯಿತು. ಜನರ ಸಾಲಿನ ಕೊನೆಯಲ್ಲಿ ಕುಳಿತಿದ್ದ ತಿಳನಿ ಎದ್ದು ಸರಸರನೆ ಅಳುತ್ತಾ ಕುಳಿತಿದ್ದ ಕಾಳುವಿನ ಹೆಂಡತಿಯ ಬಳಿ ಹೋಗಿ ಕುಳಿತುಕೊಂಡು ಆಕೆಯ ಬೆನ್ನನ್ನು ತನ್ನ ಕೈಗಳಿಂದ ಬಳಸಿ, "ಅಕ್ಕ, ಅಳಬೇಡ. ಗತಿಯಿಲ್ಲದ ಅನಾಥಳೆಂದು ಏಕೆ ಹೇಳುತ್ತಿ? ನನಗೆ ಕಾಳು ಕಟ್ಟಿಸಿಕೊಟ್ಟಿರುವ ಗುಡಿಸಿಲಲ್ಲಿ ನನ್ನ ಜೊತೆ ನೀನೂ ಇರು. ನಿನ್ನನ್ನು ನಾನು ಚೆನ್ನಾಗಿ ನೋಡಿಕೊಳ್ಳುತ್ತೇನೆ. ಕಾಳು ನನಗೆ ಕೊಟ್ಟಿರುವ ನಗನಾಣ್ಯಗಳಲ್ಲಿ ನಿನಗೂ ಸಮಪಾಲು ಕೊಡುತ್ತೇನೆ. ಇದ್ದ ಅನ್ನವನ್ನು ಇಬ್ಬರೂ ಹಂಚಿಕೊಂಡು ತಿನ್ನೋಣ. ಇನ್ನು ಅಳುವುದು ಸಾಕು. ನಡೆ, ನಮ್ಮ ಗುಡಿಸಲಿಗೆ ಹೋಗೋಣ," ಎಂದು ಸಮಾಧಾನಪಡಿಸಿ ಆಕೆಯ ಕೈ ಹಿಡಿದು ನಡೆಸಿಕೊಂಡು ಹಳ್ಳಿಯ ಕಡೆ ನಡೆದಳು ತಿಳನಿ.

ಕೂಡಲೇ ಚಾಡು ಆ್ಯಂಡರ್‌ಸನ್ನರ ಹತ್ತಿರ ಹೋಗಿ, "ದೊರೆ, ನಾನು ಕೊಟ್ಟಿದ್ದ ಅರ್ಜಿಯನ್ನು ಹಿಂದಕ್ಕೆ ಕೊಡಿ," ಎಂದು ಕೇಳಿದಾಗ ಅವರಿಗೆ ಚಾಡುವಿನ ಉದ್ದೇಶ ತಿಳಿಯಲಿಲ್ಲ. ಅರ್ಜಿಯನ್ನು ಚಾಡುವಿಗೆ ಹಿಂದಿರುಗಿಸಿದರು. ಚಾಡು ಆ್ಯಂಡರ್‌ಸನ್ನರ ಮುಂದೆ ಆ ಅರ್ಜಿಯನ್ನು ಚೂರುಚೂರಾಗಿ ಹರಿದು ಗಾಳಿಗೆ ತೂರಿದ. ಸೊಂಟಕ್ಕೆ ಸಿಕ್ಕಿಸಿಕೊಂಡಿದ್ದ ದುಡ್ಡಿನ ಹಿಮ್ಮಣಿಯನ್ನು ತೆಗೆದು ಅದರಲ್ಲಿದ್ದ ಐವತ್ತೈದು ರೂಪಾಯಿಗಳನ್ನು ಬೊಗಸೆಗೆ ಸುರುವಿಕೊಂಡು ಆ್ಯಂಡರ್‌ಸನ್ನರ ಮುಂದೆ ನಿಂತು, "ದೊರೆ, ಕಾಳು, ನಾನು ಒಂದೇ ಊರಿನವರು. ಈಗ ಕಾಳು ದುಡಿದು ಎರಡು ಹೊಟ್ಟೆಗಳನ್ನು ಸಾಕಬೇಕಾಗಿದೆ. ಅದರಲ್ಲಿಯೂ ಒಂದಂತೂ ಕಾಯಿಲೆಯಿಂದ ನರಳುತ್ತಿರುವ ಜೀವ. ಈ ಸ್ಥಿತಿಯಲ್ಲಿ ನಾನು ಅವನಿಂದ ಹಣ ಪಡೆದರೆ ದೇವರು ಮೆಚ್ಚಲಾರ. ನನಗಿಂತ ಅವನಿಗೆ ಈ ಹಣದ ಅವಶ್ಯಕತೆ ಬಹಳವಾಗಿದೆ. ದೊರೆ ದಯಮಾಡಿ ಈ ಹಣವನ್ನು ಕಾಳುವಿಗೆ ಹಿಂದಿರುಗಿಸಲು ಅಪ್ಪಣೆ ಕೊಡಿ." ಎಂದು ವಿನೀತನಾಗಿ ನುಡಿದಾಗ ಆ್ಯಂಡರ್‌ಸನ್ನರು ಮೂಕರಾದರು. ಕಾಳುವಿನ ಕಣ್ಣು ತುಂಬಿ ಬಂತು. ✡

* ಪತ್ನಿಯನ್ನುಳಿದು ಜೀವನದ ಎಲ್ಲ ವಸ್ತುಗಳೂ ಸರಳವಾದವುಗಳೆ.
* ಸ್ತ್ರೀಯರು ಮನಸ್ಸಿಗೆ ಉಲ್ಲಾಸವನ್ನುಂಟುಮಾಡುತ್ತಾರೆ. ಆದರೆ ಒಂದು ವೇಳೆ ಬ್ರಹ್ಮ ಅವರನ್ನು ಸೃಷ್ಟಿಸದೆ ಹೋಗಿದ್ದರೆ ನಮಗೆ ಉಲ್ಲಾಸದ ಅವಶ್ಯ-

# ಕೀಟಪ್ರಪಂಚದಲ್ಲಿ ಮಕ್ಕಳ ಯೋಗಕ್ಷೇಮ

ಕೆ. ಎ. ಕುಲಕರ್ಣಿ

ಕೀಟಗಳು ತಮ್ಮ ಮಕ್ಕಳ ಯೋಗಕ್ಷೇಮವನ್ನು ನೋಡಿಕೊಳ್ಳುವ ರೀತಿ ಮಾನವನಿಗೆ ಅಪರೂಪವಾದುದು. ಇತರ ಪ್ರಾಣಿಗಳಿಗೂ ರೋಗ ರುಜಿನ ಹಾಗೂ ಇತರ ನೈಸರ್ಗಿಕ ಶತ್ರುಗಳ ಕಾಟ ಇದ್ದದ್ದೇ. ಈ ಕಾಟ ಪ್ರಾರಂಭಿಕ ಹಂತದಲ್ಲೇ ಆರಂಭವಾಗುತ್ತದೆ. ಮೊಟ್ಟೆ ಮರಿ ಹಾಗೂ ಪ್ರಾಯ ಇವು ಕೀಟ ಜೀವನದ ಮೂರು ಹಂತಗಳು. (ಕೆಲವೊಂದು ಗುಂಪುಗಳಲ್ಲಿ ಮರಿಯು ಕೋಶಾವಸ್ಥೆಯನ್ನು ಹೊಂದಿ ನಂತರ ಪ್ರಾಯ ಹಂತಕ್ಕೆ ಪದಾರ್ಪಣವಾಗುವದು.) ಸಾಮಾನ್ಯವಾಗಿ ಪ್ರಾಯಕ್ಕೆ ಬಂದ ಕೀಟ ಸ್ಥಳದಿಂದ ಸ್ಥಳಕ್ಕೆ ಧಾವಿಸಿ ಆಹಾರವನ್ನು ಅರಸಿ ತಿನ್ನುವದು. ಯಾವುದೇ ಅಪಾಯದಿಂದ ಪಾರಾಗುವ ಯೋಗ್ಯತೆಯನ್ನೂ ಅದು ಪಡೆದಿರುವದು. ಆದರೆ ಮೊಟ್ಟೆ ಮರಿಗಳದು ಅಸಹಾಯಕ ಅವಸ್ಥೆ. ಮೊಟ್ಟೆಯೊಡೆದು ಹೊರಬಿದ್ದ ಮರಿ ಬೆಳೆದು ಪ್ರೌಢಾವಸ್ಥೆಯನ್ನು ಹೊಂದುವವರೆಗೆ ನಾನಾತರಹದ ತೊಂದರೆಗಳನ್ನು ಎದುರಿಸಬೇಕು. ಮಂಜು, ಮಳೆ, ತೀವ್ರ ಸೂರ್ಯಪ್ರಕಾಶ ಹಾಗೂ ಶತ್ರುಗಳಿಂದ ಅಡಿಗಡಿಗೆ ಪಾರಾಗಬೇಕು. ಎಷ್ಟೋ ಮರಿಗಳು ಆಹಾರ–ಆಶ್ರಯಗಳು ಸಿಗದೆಯೂ ನೈಸರ್ಗಿಕ ಶತ್ರುಗಳ ದವಡೆಗೆ ಸಿಕ್ಕೂ ನಾಶವಾಗುವವು. ಇವೆಲ್ಲ ಎಡರು ತೊಡರುಗಳಿದ್ದರೂ ಈ ಅಸಂಖ್ಯಾತ ಕೀಟಗಳು ಅಭಿವೃದ್ಧಿ ಹೊಂದುವದು ಹೇಗೆ? ಸದಾ ವಿನಾಶದ ಹಾದಿಯಲ್ಲೇ ಇದ್ದರೂ ಅವು ಹೇಗೆ ಬೆಳೆಯುತ್ತವೆಂಬುದು ಯಾರಿಗಾದರೂ ಆಶ್ಚರ್ಯವುಂಟು ಮಾಡುವ ವಿಚಾರ. ಹೆಣ್ಣಿನ ಜೊತೆ ಸಮಾಗಮ ಹೊಂದಿದ ನಂತರ ಗಂಡು ಸರ್ವೇಸಾಮಾನ್ಯವಾಗಿ ಮರಣವನ್ನಪ್ಪುವದು. ಇದಕ್ಕೆ ಅಪವಾದಗಳೂ ಉಂಟು. ನಂತರ ತಾಯಿಯೇ ಮೊಟ್ಟೆ–ಮರಿಗಳ ಹಿತಚಿಂತಕಳು. ಆಕೆ ತನ್ನ ವಂಶ ಬೆಳೆದು ಅಭಿವೃದ್ಧಿಯಾಗಲು ನೆರವಾಗುವಳು.

## ಮೊಟ್ಟೆಯ ರಕ್ಷಣೆ

ತಾಯಿ ಕೀಟವು ಬಹಳ ಜಾಣ್ಮೆಯಿಂದ ಸರಿಯಾದ ಸ್ಥಳದಲ್ಲಿ ಮುಂದೆ ತೊಂದರೆಯಾಗದಂತೆ ಮೊಟ್ಟೆಗಳನ್ನಿಡುತ್ತದೆ. ಹುಟ್ಟಲಿರುವ ಮರಿಗೆ ಹೆಚ್ಚಿನ ತೊಂದರೆ ಇಲ್ಲದೆ ಬೇಗನೇ ಆಹಾರ ಸಿಗುವ ಹಾಗೆ ಕಾಳಜಿ ವಹಿಸುವದು. ಮೊದಲು ಮೊಟ್ಟೆ ಇಡುವ ಸ್ಥಳಗಳನ್ನು ಪತ್ತೆ ಹಚ್ಚುವದು. ಸೊಳ್ಳೆಯ ಮರಿಯು ನೀರಿನಲ್ಲಿ ಬೆಳೆಯುವದರಿಂದ ಮೊಟ್ಟೆಗಳನ್ನು ಜಾಗರೂಕವಾಗಿ ನೀರಿನ ಮೇಲೆಯೇ

ಇಡುವದು. ಜೊಂಡಿಗವು ತನ್ನ ಮೊಟ್ಟೆಗಳನ್ನು ಚೌಕೋನಾಕಾರದ ಪೆಟ್ಟಿಗೆಯಲ್ಲಿ ಇಟ್ಟು ಇಂಥ ಪೆಟ್ಟಿಗೆಗಳನ್ನು ಮನೆಯಲ್ಲಿ ಸಂದುಗಳಲ್ಲಿ ಅಂಟಿಸುವದು. ಮಿಡತೆಗಳು ತಮ್ಮ ತತ್ತಿಗಳನ್ನೊಳಗೊಂಡ ಗಂಟನ್ನು ಮಣ್ಣಿನಲ್ಲಿ ಆಳವಾಗಿ ಇಡುವವು. ಹುಲಿ ದುಂಬಿಗಳು ಮಣ್ಣಿನಲ್ಲಿ ಕೊಳವೆಯಾಕಾರದ ಹುತ್ತಗಳಲ್ಲಿ ಮೊಟ್ಟೆಗಳನ್ನಿಟ್ಟು ಮಣ್ಣಿನಿಂದ ಮುಚ್ಚುವವು. ಶಿವನ ಕುದುರೆಯು ತನ್ನ ಹಿಂಭಾಗದಿಂದ ಬರುವ ಒಂದು ತರಹದ ದ್ರವದಿಂದ ಮೊಟ್ಟೆಗಳನ್ನು ಗಂಟಿನಲ್ಲಿ ಇಟ್ಟು ಅದನ್ನು ಗಿಡದ ಟೊಂಗೆಗೆ ಅಂಟಿಸುವದು. ಕೆಲವು ಪತಂಗಗಳು ಮೊಟ್ಟೆಗಳನ್ನು ಎಲೆಯ ಹಿಂಭಾಗದಲ್ಲಿಟ್ಟು ಅವುಗಳ ಮೇಲೆ ಹಿಂಭಾಗದಲ್ಲಿರುವ ಕೂದಲುಗಳನ್ನು ಹರಡುವವು. ಈ ರೀತಿ ಮೊಟ್ಟೆಗಳು ನೈಸರ್ಗಿಕ ಶತ್ರುಗಳ ಕಣ್ಣಿನಿಂದ ಪಾರಾಗುವವು. ನೀರಿನಲ್ಲಿರುವ ದುಂಬಿಗಳು ಮೊಟ್ಟೆ ಇಡುವ ವಿಧಾನವಂತೂ ಕುತೂಹಲಕಾರಿಯಾದದ್ದು. ತಾಯಿ ದುಂಬಿಯು ತೇಲುತ್ತಿರುವ ಎಲೆಯ ಅಡಿಯಲ್ಲಿ ನುಸುಳಿ ಅದನ್ನು ದುಂಡಗೆ ಹೆಣೆದು ಮೊಟ್ಟೆಗಳನ್ನಿಟ್ಟು ನೀರಿನಲ್ಲಿ ತೇಲಿಬಿಡುವದು. ಸಗಣಿ ಹುಳುವು ಸಗಣಿಯಿಂದ ಉಂಡೆಗಳನ್ನು ಮಾಡಿ ಅದರಲ್ಲಿ ಮೊಟ್ಟೆಗಳನ್ನಿಡುವುದು.



1. ಕಣಜ ಕಡಿದ ಎಲೆ.

2. ಕಡಿದ ಎಲೆಯಿಂದ ತಯಾರಿಸಿದ ಗೂಡು.

3. ಗೂಡಿನ ಒಳದೃಶ್ಯ.



4. ಮೊಟ್ಟೆಯ ವಿವಿಧ ಗುಂಪುಗಳು

## ಮರಿಗಳ ಗೂಡು

ಕೀಟಗಳು ಮರಿಗಳಿಗಾಗಿ ಗೂಡುಗಳನ್ನು ಕಟ್ಟುವದರಲ್ಲಿ ನಿಪುಣವಾಗಿರುತ್ತವೆ. ಹುಟ್ಟಲಿರುವ ಮರಿಗಳಿಗಾಗಿ ಕಟ್ಟಿರುವ ಗೂಡುಗಳು ಮೊಟ್ಟೆ ಹಾಗೂ ಮರಿಗಳಿಗೆ ಆಶ್ರಯ ಕೊಡುವವು. ಇಂಥ ಗೂಡುಗಳಲ್ಲಿ ತಾಯಿಯು ಮೊಟ್ಟೆಯೊಡೆಯುವ ವಿಷ್ಟೋ ದಿನ ಮುಂಚೆಯೇ ಆಹಾರವನ್ನು ಮರಿಗಳಿಗಾಗಿ ಶೇಖರಿಸಿ ಇಡುವವು. ಮರಿಗಳಿಗಾಗಿ ಗೂಡುಗಳನ್ನು ಕಟ್ಟುವದರಲ್ಲಿ ಸಮಾಜವಾದಿ ಕೀಟಗಳು ಉಚ್ಚಮಟ್ಟವನ್ನು ಮುಟ್ಟಿದ್ದು ಮಾನವನ ಕಲ್ಪನಾ ಶಕ್ತಿಯನ್ನು ಮೀರಿಸುವಂತಿಹದು. ಗದ್ದಲು ಗೂಡುಗಳನ್ನು ಹಂತ ಹಂತ್ರವಾಗಿ ಮಣ್ಣಿನಿಂದ ಕಟ್ಟಿ ಅದರಲ್ಲಿ ಹಲವಾರು ಕೋಣೆಗಳನ್ನು ಕಟ್ಟುವದು. ಆಹಾರಕ್ಕಾಗಿ ತೋಟಗಳನ್ನು ಕೂಡ ಗೂಡಿನಲ್ಲಿಯೇ ನಿರ್ಮಿಸಿಕೊಳ್ಳುವದು. ಕೆಲವು ಕಿಡಿಗೇಡಿ ಕೀಟಗಳು ಇತರ ಕೀಟಗಳಿಂದ ನಿರ್ಮಿತವಾಗಿರುವ ಗೂಡುಗಳಲ್ಲಿ ತಮ್ಮ ಮೊಟ್ಟೆಗಳನ್ನಿಡು




5. ಸಗಣಿ ದುಂಬಿ ಸಗಣಿ ಉಂಡಿಯನ್ನು ಹೊಂದಿಸುತ್ತಿದೆ
6. ಮೊಟ್ಟೆ ಇಟ್ಟ ನಂತರ ಅದು ಸಗಣಿ ಉಂಡೆಯನ್ನು ಕಾಯುತ್ತದೆ

ವವು. ಇಂಥ ಕೀಟದ ಮರಿಗಳು ಬೇರೆ ತಾಯಿ ತಂದಿಟ್ಟ ಆಹಾರದ ಮೇಲೆ ಅಭಿವೃದ್ಧಿ ಹೊಂದುವವು. ಚಿಮ್ಮಂಡಿ ಜಾತಿಯ ಕೀಟಗಳು ನೆಲವನ್ನು ಅಗೆದು ಕಟ್ಟಿದ ಗೂಡಿನಲ್ಲಿ ಮೊಟ್ಟೆಗಳನ್ನಿಡುವವು.

## ಮರಿಗಳ ಪೂರ್ವ ಆಹಾರ

ಮೊಟ್ಟೆಗಳನ್ನು ಜಾಗರೂಕತೆಯಿಂದ ಇಡುವವಲ್ಲದೇ ಹಲವಾರು ಕೀಟಗಳು ತಮ್ಮ ಮರಿಗಳಿಂದಾಗಿ ಆಹಾರದ ಪೂರ್ವ ಸಿದ್ಧತೆಯನ್ನು ಕೂಡಾ ಮಾಡಿರುತ್ತವೆ. ಎಷ್ಟೋ ಸಲ ತಾಯಿ ಗೂಡುಗಳಲ್ಲಿ ವಿಶೇಷ ಆಹಾರದ ಎಲೆಗಳನ್ನು ಮರಿಗಳಿಗೋಸ್ಕರ ಇಡುತ್ತದೆ. ದನಗಳ ಮೇಲೆ ಬರುವ ನೊಣಗಳು ತಮ್ಮ ಮೊಟ್ಟೆಗಳನ್ನು ಸೊಳ್ಳೆಗಳ ಬೆನ್ನ ಮೇಲೆ ಇಡುತ್ತವೆ. ಸೊಳ್ಳೆಗಳು ದನಗಳಿಗೆ ಕಚ್ಚುವಾಗ ಮೊಟ್ಟೆಯೊಳಗಿಂದ ಬಂದ ಮರಿಗಳು ಸೊಳ್ಳೆ ಮಾಡಿದ ಗಾಯದಲ್ಲಿ ದನಗಳ ದೇಹವನ್ನು ಸೇರಿಕೊಂಡು ಅಭಿವೃದ್ಧಿ ಹೊಂದುವವು. ಕಣಜದ ಜಾತಿಗೆ ಸೇರಿದ ಕೀಟಗಳು ಬೇರೆ ಜಾತಿಯ ಕೀಟದ ಮರಿಗಳನ್ನು ತಂದು ಗೂಡಿನಲ್ಲಿ ಇಟ್ಟ ನಂತರ ಮೊಟ್ಟೆಗಳನ್ನಿಡುವವು. ಮೊಟ್ಟೆಯೊಡೆದು ಬಂದ ಮರಿಗಳಿಗೆ ಆಹಾರ ಬೇಗನೇ ಲಭ್ಯವಾಗುತ್ತದೆ.

## ಮರಿಗಳ ಪೋಷಣೆ

ಹಲವಾರು ಕೀಟಗಳು ತಮ್ಮ ಮೊಟ್ಟೆ ಹಾಗೂ ಮರಿಗಳೊಂದಿಗೆ ಜೀವಿಸುತ್ತ, ಅವುಗಳ ಮೇಲಿಂದ ಮೇಲೆ ಸ್ವಚ್ಛಗೊಳಿಸುತ್ತ ಸಂರಕ್ಷಣೆ ಮಾಡುವವು. ತಿಗಣೆ ಜಾತಿಗೆ ಸೇರಿದ ಕೆಲವು ಕೀಟಗಳು ಎಲೆಯಲ್ಲಿ ಮೊಟ್ಟೆಗಳನ್ನಿಟ್ಟು ಅವುಗಳ ಮೇಲೆಯೇ ಕುಳಿತುಕೊಂಡು ಕಾಯುವವು. ಎಲ್ಲಾ ಮೊಟ್ಟೆಗಳಿಂದ, ಮರಿ ಬಂದು, ಅವು ತಮ್ಮಷ್ಟಕ್ಕೇ ತಿರುಗಾಡಿ ಆಹಾರ ಅರಸತೊಡಗಿದ ನಂತರವೇ ತಾಯಿ ಕೀಟ ಅವುಗಳ ಪೋಷಣೆಯ ಜವಾಬ್ದಾರಿಯಿಂದ ಮುಕ್ತವಾಗುವುದು. ಮರಿಗಳನ್ನು ತಮ್ಮ ಜೊತೆಯಲ್ಲಿಯೇ ತೆಗೆದುಕೊಂಡು ಹೋಗುವ ಕೆಲ




7. ಸೀಸಿನ ದುಂಬಿ ಎಲೆಗಳಿಂದ ನಿರ್ಮಿಸಿದ ಗೂಡುಗಳಲ್ಲಿ ಮೊಟ್ಟೆಗಳನ್ನಿಡುತ್ತಿದೆ.

# ಆಭಾಸಕರ ಪದಪ್ರಯೋಗ

ಸಭೆ – ಸಮಾರಂಭಗಳಲ್ಲಿ ನಾವು ಆಲಿಸುವ ಭಾಷಣಗಳಲ್ಲಿ ಸಾಮಾನ್ಯವಾಗಿ ನಮ್ಮ ಗಮನಕ್ಕೆ ಅಷ್ಟಾಗಿ ಬಾರದ ತಪ್ಪು ಪದಪ್ರಯೋಗಗಳು ಅನೇಕ. ಸಂಸ್ಕೃತಜ್ಞಾನವುಳ್ಳ ಸಭಾಸದರು ಸ್ವಲ್ಪ ವಿಮರ್ಶಿಸಿ ನೋಡಿದರೆ ಆ ತಪ್ಪು ಪದಪ್ರಯೋಗಗಳು ನಿರಾಶೆಯುಂಟುಮಾಡಬಹುದು, ನಾಚಿಕೊಳ್ಳುವಂತೆ ಮಾಡಬಹುದು ಇಲ್ಲವೆ ರೊಚ್ಚಿಗೆಬ್ಬಿಸಬಹುದು. ಈ ಉದಾಹರಣೆ ನೋಡಿ—

"ಮಾನ್ಯ ಅಧ್ಯಕ್ಷರೇ, ಮುಖ್ಯ ಅತಿಥಿಗಳೆ ಹಾಗೂ ನೆರೆದಿರುವ ನನ್ನ ಬಂಧು – ಭಗಿನಿಯರೇ, ಎಂದು ಒಬ್ಬ ಭಾಷಣವನ್ನಾರಂಭಿಸುತ್ತಾನೆ. ಸಂಸ್ಕೃತ ಬಲ್ಲವನು ಇದರಲ್ಲಿ ಒಂದು ತಪ್ಪನ್ನು ಮನಗಾಣಬಲ್ಲ, 'ಭಗಂ ಅಸ್ಯಾಃ ಅಸ್ತಿ ಇತಿ ಭಗಿನೀ' ಎಂಬುದು 'ಭಗಿನೀ' ಎಂಬ ಶಬ್ದಕ್ಕೆ ಸಂಸ್ಕೃತದಲ್ಲಿರುವ ಅರ್ಥ. ಬದಲಾಗಿ ಭಾಷಣಕಾರನು ಶುದ್ಧ ಕನ್ನಡದಲ್ಲಿ "ನನ್ನ ನಲ್ಮೆಯ ಅಕ್ಕ–ತಂಗಿಯರೆ, ಅಣ್ಣ–ತಮ್ಮಂದಿರೆ," ಎಂದು ಸಂಬೋಧಿಸಿದರ ಚೆನ್ನಾಗಿರುತ್ತದಲ್ಲವೆ? ಆದರೆ ಹಾಗಾಗುವುದಿಲ್ಲ.

ಹಾಗೆಯೇ ಸಭೆಯ ಮುಕ್ತಾಯಕ್ಕೆ ಧನ್ಯವಾದಗಳನ್ನು ಅರ್ಪಿಸುವಾತ, "ಮೌನವಾಗಿ ಕುಳಿತು ಸಹಕರಿಸಿದ ಎಲ್ಲ ಸಭಿಕರಿಗೂ ನನ್ನ ಧನ್ಯವಾದಗಳು," ಎಂದು ಹೇಳಿ ಕಾರ್ಯಕ್ರಮಕ್ಕೆ ಮಂಗಳ ಹಾಡುತ್ತಾನೆ. ಆದರೆ ಇಷ್ಟರಲ್ಲೇ ಆತ ಒಂದು ದೊಡ್ಡ ಪ್ರಮಾದವೆಸಗಿರುತ್ತಾನೆ. ಸಂಸ್ಕೃತದಲ್ಲಿ 'ಸಭಿಕಃ' ಎಂದರೆ ಜೂಜಾಡುವವ ಎಂದರ್ಥ. 'ಸಭಿಕಾಃ ದ್ಯೂತಕಾರಕಾಃ' ಎಂದು ಉಲ್ಲೇಖವಿದೆ. ಪ್ರೇಕ್ಷಕರನ್ನು – ಶ್ರೋತೃಗಳನ್ನು ಜೂಜಾಡುವವರೆ, ಎಂದು ಕರೆಯಬಹುದೆ? 'ಸಭಾಸದರೆ' ಎಂದರೆ ಯಾವ ಆಭಾಸಕ್ಕೂ ಎಡೆಯಾಗುವುದಿಲ್ಲವಲ್ಲ.

**— ಕೇಶವ ಐತಾಳ, ಸಾಲಿಗ್ರಾಮ**


ಒಲವಿನ
ಗೂಡು
ಮೂಲ: ಪೆದಾಂಕರ ಸಿಂಗರ್
ಕನ್ನಡಕ್ಕೆ: ವಿಜಯಾ ಭೂಷಣ

ಮಿರ್ ಬಾಂಜ್ ಆ ಹೊತ್ತು ಕೊಂಚ ಕೊಸರಾಡುತ್ತಲೇ ನಿದ್ದೆಯಿಂದ ಎದ್ದ.

ಅವನ ತೋರ ಮೈ ನಡುಗುತ್ತಿದೆ. ಹಾಗೆ ನೋಡಿದರೆ ಮಿರ್ ಬಲಹೀನನೇನಲ್ಲ. ವಯಸ್ಸಿದ್ದಾಗ ಕುಖ್ಯಾತ ಕಳ್ಳನಾಗಿ ಮನೆಗಳನ್ನು ಕೊಳ್ಳೆಹೊಡೆಯುವುದರಲ್ಲಿ ಆತ ಸಿದ್ಧಹಸ್ತನಾಗಿದ್ದ. ಒಂದು ಭಾರಿ ಕಳ್ಳರ ಗುಂಪಿಗೆ ಸೇರಿ ತನ್ನ ಶಕ್ತಿ ಎಷ್ಟೆಂದು ತೋರಿಸಿದ್ದ. ಮಾದಕ ಪಾನೀಯಗಳನ್ನು ಕುಡಿಯುವುದರಲ್ಲಿ ಜೀವದೊಡನೆ ಸೆಣಸಾಡುವುದರಲ್ಲಿ ಅವನಾಗಲೇ ಎಲ್ಲಾ ರಿಕಾರ್ಡುಗಳನ್ನೂ ಗಾಳಿಗೆ ತೂರಿದ್ದ. ತನ್ನ 'ವೃತ್ತಿಜೀವನ'ದಲ್ಲಿ ಕೆಲವೇ ಬಾರಿ ಪೋಲೀಸರಿಗೆ ಸಿಕ್ಕಿಬಿದ್ದಿದ್ದ. ಹಾಗೆ ಸಿಕ್ಕಾಗಲೂ ಕೈಗೆ ಹಾಕಿದ ಬೇಡಿಗಳನ್ನು ಹರಿದುಕೊಂಡೋ ಪೋಲೀಸ್ ವ್ಯಾನಿನ ಬಾಗಿಲುಗಳನ್ನು ಮುರಿದೋ ತಪ್ಪಿಸಿಕೊಳ್ಳುತ್ತಿದ್ದ.

ಇಂಥ ಮಿರ್ ಬಾಂಜ್ ಶ್ರೀಮಂತನೊಬ್ಬನ ಮನೆಯಲ್ಲಿ ಅಡುಗೆಯವಳಾಗಿರುವ ಬಿಲ್ಕಾಳ ಪ್ರೇಮದಲ್ಲಿ ಸಿಲುಕಿಕೊಂಡು ಕೊನೆಗೆ ಅವಳನ್ನೇ ಮದುವೆಯಾದ. ಆದರೆ ಮದುವೆಯಾದ ಮೇಲೊಂದು ನಿಶ್ಚಿತ ವರಮಾನ ತರುವ ಉದ್ಯೋಗ ಬೇಕಲ್ಲ. ಸರಿ. ಉದ್ಯೋಗಾನ್ವೇಷಣೆಗೆ ತೊಡಗಿದ. ಅವನು ಕಳ್ಳನೆಂಬ ಕಾರಣಕ್ಕೆ ಎಲ್ಲೂ ನೌಕರಿ ಸಿಕ್ಕದೆ ಕೊನೆಗೆ ವಾರ್ಸಾದ 'ಉನ್ನತ ಶವ ಸಂಸ್ಕಾರ ಸಮಿತಿ'ಯಲ್ಲಿ ಒಂದು ನೌಕರಿ ಗಳಿಸಿದ. ಅದು ಸತ್ತವರಿಗೆ ಸಮಾಧಿ ಸ್ಥಳವನ್ನೂ ಇತರೆ ಸದುಪಾಯಗಳನ್ನೂ ನೋಡುವ, ಒದಗಿಸುವ ಸಮಿತಿ.

ಆದರೆ ಕೆಲವೇ ದಿನಗಳಲ್ಲಿ ಆತನಿಗೆ ತಾನು ಬಿಲ್ಕಾಳನ್ನು ಮದುವೆಯಾದದ್ದು ದೊಡ್ಡ ತಪ್ಪೆಂದು ತಿಳಿಯಿತು. ಅದಕ್ಕೆ ಕಾರಣಗಳು ಅನೇಕ. ಮೊದಲನೆಯದು, ಅವಳಿಗೆ ತಾಯಿಯಾಗುವ ಪುಣ್ಯವಿಲ್ಲ. ಎರಡನೆಯದು ರಕ್ತ ಕಾರುವ ಕಾಯಿಲೆ. ಎಲ್ಲಕ್ಕಿಂತ ದುರ್ಭರವಾದ ಮೂರನೆಯ ಕಾರಣ 'ಹಂದಿ'

ಪ್ರಸಿದ್ಧಿ ಗಳಿಸಿದ್ದು. ಸಿಟ್ಟು ಬಂತೆಂದರೆ ಅವಳಷ್ಟು ಆವೇಶವಾಗಿ ಕಿರುಚಾಡುವವಳನ್ನು ಅವನು ಬೇರೆಲ್ಲೂ ನೋಡಿಲ್ಲ.

ಅವಳಿಗೆ ಸೀರಿಯಸ್ ಕಾದಂಬರಿಗಳನ್ನು ಓದುವುದರಲ್ಲಿ ಹೆಚ್ಚು ಸಂತೋಷ. ತಾನು ಊಟ ಮಾಡುವಾಗ ಗ್ರಾಮಾಫೋನಿನಲ್ಲಿ ರಂಗಗೀತೆಗಳನ್ನೂ ಯುಗಳಗೀತೆಗಳನ್ನೂ ಕೇಳಬೇಕೆಂದು ಮಿರ್ರನ ತಹತಹನೆ. ಆದರೆ ಗ್ರಾಮಾಫೋನ್ ಎಂದರೇನೇ ಬಿಲ್ಕಾಳಿಗೆ ತಲೆನೋವು. ಪ್ರತಿ ಶುಕ್ರವಾರ ಸಾಯಂಕಾಲ ಅವರಿಬ್ಬರಿಗೆ ಜಗಳ ತಪ್ಪಿದ್ದಲ್ಲ. ಆ ದಿನ ಮೀನನ್ನು ಸಕ್ಕರೆಯೊಂದಿಗೆ ಬೆರೆಸಿ ಮಾಡೆಂದ ಮಿರ್. ಆದರೆ ಆಕೆ ಸ್ವಲ್ಪ ಹೆಚ್ಚಾಗಿಯೇ ಮೆಣಸಿನಪುಡಿ ಹಾಕಿ ಮಾಡುತ್ತಿದ್ದಳು. ಹಾಗೆ ಅಡುಗೆ ಮಾಡಬೇಡೆಂದು ಎಂದಿನಿಂದಲೋ ಹೇಳುತ್ತಿದ್ದಾನೆ. ಹಾಗೇನಾದರೂ ಗಟ್ಟಿಯಾಗಿ ಸಿಡುಕಿದರೆ ನಾಕು ಅವಳು ತಲೆ ಸುತ್ತಿಬಂದು ನೆಲಕ್ಕುರುಳಿಬಿಡುವಳು. ಮಿರ್ರನೆ ಹಸಿದ ಕಂಗಾಲು ಸ್ಥಿತಿಯಲ್ಲೇ ಡಾಕ್ಟರನನ್ನು ಹುಡುಕುತ್ತಾ ಅಲೆಯುವ ಪರಿಸ್ಥಿತಿ.

ಇಂತಹ ಪರಿಸ್ಥಿತಿಯಲ್ಲಿ ಎಲ್ಕಾ ಎನ್ನುವವಳೊಡನೆ ಮಿರ್ರನ ಪರಿಚಯವಾಗದಿದ್ದರೆ ಆತ ವಾರ್ಸಾದಿಂದ ಎಂದೋ ಓಡಿ ಹೋಗುತ್ತಿದ್ದ. ಎಲ್ಕಾಳಿಗೂ ಮಿರ್ ಕೆಲಸ ಮಾಡುವ ಶವ ಸಂಸ್ಕಾರ ಸಮಿತಿಯಲ್ಲೇ ಕೆಲಸ. ಅವಳದು ಹೆಣ್ಣು ಶವಗಳ ಜವಾಬ್ದಾರಿ—ಶವಗಳನ್ನು ಸ್ವಚ್ಛಗೊಳಿಸುವುದು; ಶವ ಸ್ಥಳಗಳನ್ನು ಸಿದ್ಧಪಡಿಸುವುದು ಇತ್ಯಾದಿ. ಅವಳ ಗಂಡ ಕಾಯಿಲೆ ಮನುಷ್ಯ, ಬರಟ. ಆತನೊಬ್ಬ ಬುಕ್ ಬೈಂಡರ್. ಅವರಿಗೆ ಇಬ್ಬರು ಮಕ್ಕಳಾದರೂ ಅವೆರಡೂ ವಿಷಮ ಜ್ವರದಿಂದ ಸತ್ತವು. ಈಗ ಎಲ್ಕಾಳಿಗೆ ನಲವತ್ತು ದಾಟಿದ ವಯಸ್ಸು. ಮಿರ್ರನಿಗಿಂತ ಎರಡು ವರ್ಷ ಹೆಚ್ಚು. ಆದರೂ ಇಪ್ಪತ್ತೈದರ ಹರೆಯದ ಹೆಣ್ಣಿನಂತೆಯೇ

ಕೆಂಪು ಸೇಬಿನ ಹಣ್ಣಿನಂತೆ ಮಿಂಚುತ್ತಿರುತ್ತವೆ. ಆಕೆ ಸಕ್ಕರೆ ಬಲು ಚೆಂದ. ಮುಗ್ಧ ಮನೋಹರಿಯಾಗಿ ಕಾಣುತ್ತಾಳೆ.

ಎಲ್ಕಾ ಶವಸಂಸ್ಕಾರ ಸಮಿತಿಗೆ ಸೇರಿದ ಮೊದಲಲ್ಲಿ ಅವಳು ಮಾಡುವ ಕೆಲಸಗಳು ಮಿರ್ರನನ್ನು ದಂಗು ಬಡಿಸಿದ್ದವು. ಅವಳು ಶವಗಳೊಂದಿಗೂ ಆಟವಾಡುತ್ತಿದ್ದಳು. 'ಬೇಗ ನಡಿ ಕೊಂಚಕಾಲ ನಮ್ಮನ್ನು ಕಂಗಾಲಾಗಿಸಿದೆ. ಪಾಪ ನಿನಗೂ ಚರಮ ರಾತ್ರಿ ಒದಗಿಬಂತು' ಒಂದು ಹೆಣವನ್ನು ಗೇಲಿ ಮಾಡಿದಳು.

'ಸುಮ್ಮನೆ ಹಿಚಿಕ್ಕೊಂಡು ಸಾಯ್ತಿ ಯಾಕೆ? ಸುಖವಾಗಿ ಸಾಯಿ. ಬೆಟ್ಟದಷ್ಟು ಆಸ್ತಿ, ಹಣ ಬಿಟ್ಟು ಹೋಗುತ್ತಿರುವೆಯಲ್ಲಾ ನಿನ್ನ ಹೆಂಡತಿಗೆ. ಅವಳು ತನ್ನ ಪ್ರಿಯಕರನೊಂದಿಗೆ ಸುಖವಾಗಿ ಕಾಲಹರಣ ಮಾಡುತ್ತಾಳೇಳು?' ಎನ್ನುತ್ತ ತಾನು ಸೇದುತ್ತಿದ್ದ ಸಿಗರೇಟನ್ನು ತೆಗೆದು ತಟ್ಟನೆ ಒಂದು ಶವದ ತುಟಿಗಳ ನಡುವೆ ಸಿಕ್ಕಿಸುವಳು. ಮಿರ್ ಅವಳ ಈ ಚೇಷ್ಟೆಗಳನ್ನು ಯಾವಾಗಲಾದರೂ ಆಡಿಕೊಂಡರೆ, 'ಹೀಗೆ ಮಾಡಿದ್ದಕ್ಕೆ ಮಹಾ ಎಂದರೆ ನಾಲ್ಕೇಟು ಒದೀತಾರೆ; ಅಷ್ಟೇ ಅಲ್ವಾ, ಒದೀಲಿ ಬಿಡು' ಎಂದು ತನ್ನ ಪಿರ್ರೆಗಳ ಮೇಲೆ ತಾನೇ ಬಡಿದುಕೊಳ್ಳುವಳು.

ಈ ವೃತ್ತಿ ಸಾಂಗತ್ಯದಲ್ಲಿ ನೋಡ ನೋಡುತ್ತಲೆ ಮಿರ್ ಎಲ್ಕಾಳ ಪ್ರೇಮಪಾಶದಲ್ಲಿ ಸಿಲುಕಿದ. ಅದಕ್ಕೆ ಮೊದಲು ಎಂದೂ ಹೆಣ್ಣಿನ ಹಿರಿತನವನ್ನು ಸತ್ತರೂ ಸಹಿಸೆನೆಂದು ಹೇಳಿಕೊಳ್ಳುತ್ತಿದ್ದ. ಮತ್ತೆ ಎಲ್ಕಾಳ ವಿಷಯ? ಅವಳು ಅವನ ಹೊಟ್ಟೆಯನ್ನೂ ಉದ್ದಗಲವನ್ನೂ ತಿಂಡಿಪೋರತನವನ್ನೂ ಮಟ್ಟ ಪಾದಗಳನ್ನೂ ಗೊಗ್ಗರು ಧ್ವನಿಯನ್ನೂ ಇಡೀ ಅವನ ಶರೀರವನ್ನು ಅಣಕ ಮಾಡುತ್ತಿದ್ದಳು. ಆದರೆ ಅದೆಲ್ಲಾ ಸರಸಕ್ಕಾಗಿಯೇ. ಅವನನ್ನು ಸುಬ್ಬಾ ಎಂದೂ ಹಂದಿ ಎಂದೂ ದನವೆಂದೂ ಬಗೆ ಬಗೆಯ ಹೆಸರುಗಳಿಂದ ಕರೆಯುತ್ತಿದ್ದಳು. ಮಿರ್ ಅಪ್ಯಾಯವದನ್ನೂ ಹಿಡಿಸಿಕೊಳ್ಳುತ್ತಿರಲಿಲ್ಲ ಅವರಿಬ್ಬರೂ ಅವನ ಮನೆಯಲ್ಲಿ ಇವಳನ್ನಾಗಲಿ, ಇವಳ ಮನೆಯಲ್ಲಿ ಅವನನ್ನಾಗಲಿ

ಮಾತು. ಆದುದರಿಂದ ಎಲ್ಲೋ ಬೇರೆಡೆ ಕಲೆಯುತ್ತಿದ್ದರು. ದೂರ ದೂರದ ಸ್ಥಳಗಳಿಂದ ಶವಗಳನ್ನು ತರಲೋಸುಗ ಶವಸಂಸ್ಕಾರ ಸಮಿತಿಗೆ ಒಂದು ಕಾರು ಇದೆ. ದೂರ ಪ್ರಯಾಣ ಬಿದ್ದಾಗಲೆಲ್ಲಾ ಎಲ್ಕಾ ತನಗೆ ಜೊತೆಯಾಗಿ ಮಿರ್ ಇರುವಂತೆ ನೋಡಿಕೊಳ್ಳುತ್ತಿದ್ದಳು. ಹಾಗೆ ಹೋದಾಗ ಕಾರನ್ನು ಹೊಲಗಳಲ್ಲೊ ಕಾಡಿನ ಮಧ್ಯದಲ್ಲೊ ರಾತ್ರಿ ಹೊತ್ತು ಎಲ್ಲಿ ಅನುಕೂಲವಿದ್ದರೆ ಅಲ್ಲಿ ತಂಗಿದ್ದು ಪ್ರೇಮಿಸಿ, ಕಾಮಿಸಿಕೊಳ್ಳುತ್ತಿದ್ದರು. 'ಸತ್ತವರಿಗೆ ಏನವಸರ? ಬಿದ್ದಿರುತ್ತಾರೇಳು; ಸಮಾಧಿಗಳೇನೂ ಓಡಿ ಹೋಗಲ್ಲ' ಎನ್ನುತ್ತಿದ್ದಳು.

ಎಲ್ಕಾಳನ್ನು ಮಿರ್ ಕಾಮಿಸುವಾಗಲಾಗಲಿ ಮಿರ್ರನನ್ನು ಎಲ್ಕಾ ಕಾಮಿಸುವಾಗಲಾಗಲಿ ಅವಳ ತುಟಿಗಳ ನಡುವೆ ಯಾವಾಗಲೂ ಸಿಗರೇಟು ಸುಡುತ್ತಿರುತ್ತದೆ. ಪ್ರೇಮಿಸಿಕೊಳ್ಳುವ ಕೊಂಚ ಕಾಲವಾದರೂ ಸತ್ತವರನ್ನೂ ಶವ ಕೋಣೆಗಳನ್ನೂ ಅದಕ್ಕೆ ಸಂಬಂಧಿಸಿದ ಎಲ್ಲಾ ವಿಷಯಗಳನ್ನೂ ಮರೆಯಬೇಕೆಂಬುದೇ ಮಿರ್ರನ ಆಶಯ. ಆದರೆ ಆಗಲೂ ಎಲ್ಕಾ ಅವುಗಳ ಪ್ರಸ್ತಾಪ ಮಾಡುತ್ತಿದ್ದಳು.

'ಮಿರ್! ನೀ ಸತ್ತರೆ! ಅಬ್ಬಾ ನಿನ್ನ ಶರೀರ ಎಷ್ಟು ಭಾರವಿರುತ್ತೋ? ಹೊರಲು ಕನಿಷ್ಟ ಎಂಟು ಹತ್ತು ಜನವಾದರೂ ಬೇಕಾಗುತ್ತದೆ' ಎನ್ನುವಳು.

'ಥತ್ ಬಾಯ್ಮುಚ್ಚು.'

'ನೋಡ್ದೆಯಾ ಸಾವೆಂದರೆ ಆಗಲೇ ಈ ಕೋಣನಿಗೆ ನಡುಕ ಬಂತು. ಸಾವನ್ನು ಯಾರೂ ತಪ್ಪಿಸಿಕೊಳ್ಳಲ್ಲ'

ಮಿರ್ರನ ಮೇಲೆ ಎಲ್ಕಾಳ ಪ್ರಭಾವ ಎಷ್ಟು ಗಾಢವಾಯಿತೆಂದರೆ ಅವಳಲ್ಲಿ ಆತನಿಗೆ ಹಿಡಿಸದ ಅಂಶಗಳು ಕೂಡ ಬರುಬರುತ್ತಾ ಆಕರ್ಷಣೀಯವಾಗಿ ಕಾಣತೊಡಗಿದವು. ಅವಳು ಬಳಸುವ ನಂಬರಿನ ಸಿಗರೇಟನ್ನು ಅವನೂ ಬಳಸುತ್ತಿದ್ದ. ಅವಳಿಗೆ ಹಿಡಿಸಿದ ತಿಂಡಿಯನ್ನು ಅವನೂ ತಿನ್ನತೊಡಗಿದ.

ಮಿರ್ರನಿಗೆ ಆಲೋಚಿಸುವುದೆಂದರೆ ತಲೆನೋವು.

ದುತಾಗಿಯೋ ನಿದ್ದೆ ಬಂದಂತಾಗಿಯೋ ಮತ್ತು ಬರುತ್ತಿತ್ತವನಿಗೆ. ಅಪ್ಪಿ ತಪ್ಪಿ ಅವನೇ ಎಂದಾದರೂ ಆಲೋಚಿಸಿದರೆ ಅದು ಎಲ್ಕಾಳನ್ನು ಕುರಿತು. ಅವನಿಗೆ ಎಲ್ಕಾಳ ಚೇಷ್ಟೆಗಳು ಹಿಡಿಸುತ್ತಿರಲಿಲ್ಲ. ಆದರೆ ಪ್ರತಿ ಹೆಣ್ಣಿಗೂ ಯಾವುದೋ ಒಂದು ಹವ್ಯಾಸ ತಪ್ಪದೆಂದು ಸರಿ ಮಾಡಿಕೊಂಡು ಹೋಗುತ್ತಿದ್ದ. ತಾನೊಮ್ಮೆ ಜೈಲಿನಲ್ಲಿದ್ದಾಗ ತನ್ನ ಜೊತೆಯ ಕೈದಿಗಳ ಜೀವನದಲ್ಲಿ ಬಂದು ಹೋದ ಹೆಣ್ಣುಗಳ ಎಷ್ಟೋ ಕಥೆಗಳನ್ನು ಕೇಳಿದ್ದಾನೆ. ಆದರೂ ಅವನ ಅನುಭವ ಅವನನ್ನು ಎಲ್ಕಾಳಿಗೆ ಮತ್ತಷ್ಟು ಸಮೀಪ ಮಾಡಿತೇ ವಿನಾ ದೂರ ಮಾಡಲಿಲ್ಲ. ಅವನು ಎಲ್ಕಾಳಿಗೆ ಎಷ್ಟು ಸನಿಹವಾದನೆಂದರೆ ಬಿಲ್ಕಾಳಿಗೆ ಜೀವನಾಂಶವೇತನ ನೀಡಿದರೂ ಸರಿ, ವಿಚ್ಛೇದನ ನೀಡುವ ವರೆಗೂ ಬಂದ. ಎಲ್ಕಾ ಅದಕ್ಕೆ ಒಪ್ಪಿಕೊಳ್ಳಲಿಲ್ಲ. ಕಣ್ಣು ಮುಚ್ಚಿದರೂ, ತೆರೆದರೂ ಅವನಿಗೆ ಎಲ್ಕಾಳೇ ಕಾಣುತ್ತಿದ್ದಳು. ತನ್ನ ತಲೆಯ ಮೇಲೆ ಎಷ್ಟು ಕೂದಲುಗಳಿವೆಯೋ ಅವಳಿಗೆ ಅಷ್ಟು ವಿಟರಿದ್ದಾರೆಂದೂ ಅವನಿಗೆ ಗೊತ್ತು. ಮೋರೀಸ್ ಎನ್ನುವ ಒಬ್ಬ ಬ್ರೋಕರ್‌ನನ್ನೂ ಅವಳು ಗಾಢವಾಗಿ ಪ್ರೇಮಿಸಿದ್ದಳೆಂದು ಕೂಡ ಗೊತ್ತು. ಅವನನ್ನಾರೋ ತಿವಿದು ಕೊಂದಾಗ ಕಠಕಠ ಕುದಿದು ಅತ್ತಳೆಂದು ಕೂಡ ಗೊತ್ತು. ಆದರೂ ಅವನು ಎಲ್ಕಾಳನ್ನು ತನ್ನ ಪ್ರಾಣವಾಗಿ ಪ್ರೇಮಿಸಿದ. ಅವಳೊಂದಿಗೆ ತಾನು ಅಮೇರಿಕಕ್ಕೆ ಹೋಗಿ ಅಲ್ಲಿ ಒಂದು ಸ್ವಂತ ಶವಸಂಸ್ಕಾರ ಸಮಿತಿ ಪ್ರಾರಂಭಿಸಬೇಕೆಂದು ಅವನ ಆಶೆ. ಅಲ್ಲಾದರೆ ಬೇಗ ಬೇಗನೆ ಹಣಗಳಿಸಬಹುದು. ಸ್ವಂತ ಮನೆ ಮಾಡಬಹುದು. ಮಕ್ಕಳೊಂದಿಗೆ, ಮಡದಿಯೊಂದಿಗೆ ಸುಖವಾಗಿರಬಹುದು. ಬಿಲ್ಕಾಳನ್ನು ಒಂದು ನಿಮಿಷದಲ್ಲಿ ಕತ್ತು ಹಿಸುಕಿ ನಿವಾರಿಸಬಲ್ಲ. ಒಂದೇ ಒಂದು ಮಾತ್ರೆಯಿಂದ ಎಲ್ಕಾ ಕೂಡ ತನ್ನ ಪತಿಯನ್ನು ಪರಲೋಕಯಾತ್ರೆಗೆ ಕಳುಹಬಲ್ಲಳು.

ತಪ್ಪೇನಿದೆ ? ಅವರಿಬ್ಬರೂ ಈಗಲೋ ಆಗಲೋ ಸಾಯೋರೆ. ಕೊಂಚ ಮೊದಲೆ ಸತ್ತರೆ ಮಾತ್ರ ಗಂಟೇನು ಹೋಗುತ್ತೆ?

ಆದರೆ ಮೀರ್ ಕೈ ಮಾಡದೇನೆ ಬಿಲ್ಕಾಳಿಗೆ ರಕ್ತಸ್ರಾವ ಹೆಚ್ಚಾಯಿತು. ಅವಳನ್ನು ಸ್ಯಾನಿಟೋರಿಯಮ್ಮಿಗೆ ಸೇರಿಸಿದರು. ಮಿರ್‌ನ ಖರ್ಚುಗಳು ಬೆಳೆದವು. ಆದರೆ ಅವನ ಮನೆ ಖಾಲಿಯಾಯಿತು. ಎಲ್ಕಾ ಯಾವಾಗ ನೆನೆದರೆ ಆವಾಗ ಅವನನ್ನು ಕೂಡಲು ದಾರಿಯಾಯಿತು. ಆದರೆ ಅದೇ ವೇಳೆಗೆ ಸರಿಯಾಗಿ ಕೊಂಪೆಗಳಿಗೆ ಬೆಂಕಿ ಬಿದ್ದಂತೆ ಪ್ರಥಮ ವಿಶ್ವಸಮರ ಗಡಿಬಿಡಿಯಾಗಿ ಪ್ರಾರಂಭವಾಯಿತು. ತುಪಾಕಿ ಗುಂಡುಗಳಿಗೂ ಕತ್ತಿಗಳಿಗೂ ಆತ್ಮಹತ್ಯೆಗಳಿಗೂ ಗುರಿಯಾದ ಜನ ಬಿಡುವಿಲ್ಲದ ಹೆಣಗಳಾಗತೊಡಗಿದರು. ಮಿರ್‌ನಿಗೂ ಎಲ್ಕಾಳಿಗೂ ಹಾಯಾಗಿ ಉಸಿರೆಳೆಯಲೂ ಸಮಯ ಸಿಕ್ಕುತ್ತಿಲ್ಲ. ವಾರ್ಸಾದ ಮೇಲೆ ಜರ್ಮನಿ ಯುದ್ಧ ಸಾರುವುದರೊಂದಿಗೆ ಹಸಿವು ರೋಗ ರುಜಿನಗಳು ಹೆಚ್ಚಾದವು. ಕಾಲಚಕ್ರ ಮತ್ತಷ್ಟು ವೇಗದಿಂದ ಉರುಳತೊಡಗಿತು. 'ನೋಡು, ಈಗ ನಮಗೆ ಸಾಯಲಿಕ್ಕೂ ಬಿಡುವಿಲ್ಲ,' ಎನ್ನುತ್ತಿದ್ದಳು.

---



ರಶಿಯದಲ್ಲಿ ಝಾರನ ಪೀಡೆ ತೊಲಗಿತು. ಜರ್ಮನಿ ಬಲಹೀನವಾಯಿತು. ಪೋಲೆಂಡು ಸ್ವತಂತ್ರ ರಾಜ್ಯವಾಯಿತು.

ಇದರೊಂದಿಗೆ ಎಲ್ಕಾಳ ಪತಿಯೂ ಸತ್ತ.

ಮಿರ್ರನಿಗೆ ಎವೆ ಕಲಿಸಿದರೂ ಎರಡಕ್ಷರ ಜ್ಞಾನ ವಿಲ್ಲದುದರಿಂದ ಎಲ್ಕಾಳೇ ಸಮಿತಿಯ ವ್ಯವಹಾರ ಗಳನ್ನು ನೋಡಿಕೊಳ್ಳುತ್ತಿದ್ದಳು. ಅವಳಿಗೆ ರಷ್ಯನ್ ಪೋಲಿಶ್, ಜರ್ಮನ್ ಮೂರು ಭಾಷೆಗಳು ಬರುತ್ತವೆ. ಅವಳಿಗೆ ಪೋಲೀಸರೊಂದಿಗೆ, ಮಿಲಟರಿ ಜನರೊಂದಿಗೆ ಇತರ ಜನರೊಂದಿಗೆ ಹೇಗೆ ವ್ಯವಹಾರ ನಡೆಸಬೇಕೆಂಬುದೂ ಗೊತ್ತು. (ಶವಗಳೊಂದಿಗೇ ಮಾತಾಡುತ್ತಾಳೆಂದಮೇಲೆ !) ಗಾರ್ಸಿಯಾ ಸ್ಮಶಾನದಲ್ಲಿ ಅವಳು ಸ್ಥಳ ಕೊಂಡುಕೊಂಡು ಬಿಲ್ಕಾ ಸಮಾಧಿಯ ಬಳಿ ಮಿರ್ರನದು, ಅದರ ಪಕ್ಕದಲ್ಲಿ ತನ್ನ ಸಮಾಧಿ ಆಗುವಂತೆ ಮಿರ್ರನನ್ನು ಒಪ್ಪಿಸಿದಳು.

ಬಿಲ್ಕಾ ಸತ್ತಳೆಂದು ಸ್ಯಾನಿಟೋರಿಯಮ್ಮಿನಿಂದ ಒಂದು ದಿನ ಅವರಿಗೆ ಫೋನ್ ಬಂತು. ಮಿರ್, ಎಲ್ಕಾ ಇಬ್ಬರೂ ಅಲ್ಲಿಗೆ ಹೋದರು. ಮಿರ್ ಸಮಾಧಿ ಹೇಗೊ ತನ್ನ ಸಮಾಧಿ ಬಳಿ ಏರ್ಪಾಟಾದುದರಿಂದ ಬಿಲ್ಕಾಳ ಹಣವನ್ನು ಮೊದಲೇ ಗೊತ್ತಾದ ಸ್ಥಳಕ್ಕೆ ಒಯ್ಯದೆ ಬಳಿಯ ಗ್ರಾಮದಲ್ಲಿ ದಫನ ಮಾಡಿದರು. ಎಲ್ಕಾ ಬಿಲ್ಕಾಳ ಶವ. ವನ್ನು ಅರಿಷಿಣದಿಂದ ತೊಳೆದು ಶುಭ್ರಗೊಳಿಸಿ ಶವಪೆಟ್ಟಿಗೆ ಬಿಗಿದು ಸಮಾಧಿಗಿಳಿಸುವ ಮೊದಲು ಮುಖವೆತ್ತಿ ಬೀಳ್ಕೊಡುಗೆಯ ಗೀತೆಯನ್ನು ರಾಗವಾಗಿ ಹಾಡಿದಳು:

"ನಾವು ನಿನ್ನ ಸೇರುವೆವು; ನೀನು ನಮ್ಮನಲ್ಲ."

ಮಿರ್ ಪುನಃ ಎಲ್ಕಾಳೊಂದಿಗೆ ಮದುವೆಯ ವಿಷಯ ಪ್ರಸ್ತಾಪಿಸಿದ. ಸತ್ತವರ ಆತ್ಮ ಒಂದು ವರ್ಷದ ವರೆಗೆ ತಮ್ಮ ಸುತ್ತೂ ತಿರುಗುತ್ತಿರುವುದರಿಂದ ಅಲ್ಲಿಯವರೆಗೆ ತಡೆಯೋಣವೆಂದಳು. ಆ ಗಡುವು ತೀರಿದ ಮೇಲೆ ಮದುವೆಗೆ ಮೊದಲು ಒಂದು ಸ್ವಂತ ಮನೆಯೊಂದು ಇದ್ದರೆ ಚೆನ್ನಾಗಿರುತ್ತದೆಂದು ಪೇಚಾಡಿದಳು. ಹಾಗಾದರೆ ಅಮೇರಿಕಕ್ಕೆ ಹೋಗೋಣವೆಂದ ಮಿರ್. "ಯಾಕೆ? ಅಲ್ಲಿ ಮಾತ್ರ ನಾವು ಸಾಯದೆ ಹೀಗೆ ಬದುಕಿರುತ್ತೇವೆಯೊ?" ಎಂದು ನಿರುತ್ಸಾಹ ಪಡಿಸಿದಳು.

ಒಂದು ರಾತ್ರಿ ಯಾವುದೋ ದೊಡ್ಡ ರಹಸ್ಯ ಹೇಳುವವಳಂತೆ ಮಿರ್ರನನ್ನು ಲಗುಬಗೆಯಿಂದ ಕೇಕೆ ಹಾಕಿ ಕರೆದಳು. ಇದೋ, ಈ ಎಡಗೈ ಬೆರಳುಗಳನ್ನು ಹಿಡಿದು ನೋಡು. ಅವನು ಹಿಡಿದು ನೋಡಿದ. ಬಿರುಸಾಗಿದೆ. ಯಾಕೆಂದು ಮುಖ ಮಾಡಿದ; 'ಕ್ಯಾನ್ಸರ್'ಎಂದಳು."ನನ್ನಮ್ಮ,ದೊಡ್ಡಮ್ಮ ಈ ಕ್ಯಾನ್ಸರಿನಿಂದಲೇ ಸತ್ತರು. ನನ್ನಮ್ಮ ಕೂಡ ಡಾಕ್ಟರಲ್ಲಿ ತೋರಿಸಿಕೊಂಡಳು. ಅದರಿಂದ ಸಾವು ಕೊಂಚ ತಡವಾಗಿ ಬಂದು ನೋವು ಹೆಚ್ಚಿತೇ ವಿನಾ ಮತ್ತೇನೂ ಆಗಲಿಲ್ಲ. ನಾನು ಮಾತ್ರ ಆ ತಿಳಿಗೇಡಿತನದ ಕೆಲಸ ಮಾಡಲಾರೆ," ಎಂದು ಮಿರ್ರನನ್ನು ಅಪ್ಪಿಕೊಂಡು ಗಾಢವಾಗಿ ಮುದ್ದಿಟ್ಟಳು.

ಮತ್ತೆ ಕೆಲ ದಿನಗಳಲ್ಲಿ ದೂರದ ನಗರದಲ್ಲಿರುವ ತನ್ನ ನೆಂಟರ ಮಗಳೊಬ್ಬಳನ್ನು ಕರೆಸಿಕೊಂಡು ತನ್ನ ಕೆಲಸದಲ್ಲಿ ತರಪೇತು ನೀಡಲು ಮೊದಲಿಟ್ಟಳು. ಆ ಹುಡುಗಿಯ ವಯಸ್ಸು ಇಪ್ಪತ್ತು ಇರಬಹುದು. ಕಾಗೆಯ ಬಣ್ಣ. ಎಲ್ಕಾಳಂತೆಯೆ ತೆಳ್ಳಗಿದ್ದಾಳೆ. ಮಿರ್ರನಿಗೆ ಅವಳೆಷ್ಟೂ ಹಿಡಿಸಲಿಲ್ಲ. ತಾನೊಬ್ಬನೇ ಅಮೆರಿಕಕ್ಕೆ ಹೋಗಬೇಕೆಂದುಕೊಂಡ. ಆದರೆ ಎಲ್ಕಾಳಿಲ್ಲದೆ ಹೋಗುವುದು ಹೇಗೆ ?

ಕ್ಯಾನ್ಸರ್ ಎಲ್ಕಾಳ ಎರಡನೆಯ ಕೈಯನ್ನೋ ಹಿಡಿಯಿತು. ಅವಳ ಪರಿಸ್ಥಿತಿ ದಿನದಿನಕ್ಕೆ ಶೋಚನೀಯವಾಗತೊಡಗಿತು. ಹಾಸ್ಪಿಟಲಿನಲ್ಲಿ ರೇಡಿಯಂ ಚಿಕಿತ್ಸೆ ಮಾಡಿಸಿದರು. ನಾನು ಬದುಕನ್ನು ಇನ್ನೂ ಎಳೆಯಬೇಕೆಂದುಕೊಂಡಿಲ್ಲ. ಬೇಗನೆ ಸಾಯಬೇಕೆಂದುಕೊಂಡಿದ್ದೇನೆ, ಎಂದಳು. ಎಲ್ಕಾ ಇನ್ನೂ ಉದ್ಯೋಗ ಮಾಡುತ್ತಾ ಇದ್ದಾಳೆ. ಆದರೆ ಅವಳ ಕೆಲಸದಲ್ಲಿ ಆ ಹುಡುಗಿ ಡ್ರಿಸಿಕಾ ಹೆಚ್ಚು ಭಾಗ ನಿರ್ವಹಿಸುತ್ತಾಳೆ. ಮಿರ್ ಡ್ರಿಸಿಕಾಳಲ್ಲಿ ಕೂಡ ಕೆಲ ಗುಣಗಳನ್ನು ಕಂಡುಕೊಂಡ. ಅವಳು ಮನೆಯನ್ನು ಮಿಣಮಿಣ ಮಿರುಗುವಂತೆ ಸ್ವಚ್ಛಗೊಳಿಸುವಳು. ಎಲ್ಕಾ ತನ್ನನ್ನು ರೊಟ್ಟಿ ಬಿಸ್ಕಿಟು ಚಾಕಲೇಟುಗಳೊಂದಿಗೆ ತೃಪ್ತಿಪಡಿಸಿದರೆ ಡ್ರಿಸಿಕಾ ಕೋಳಿಮಾಂಸ. ಕುರಿಮಾಂಸ ರುಚಿ

ರುಚಿಯಾಗಿ ಮಾಡುವಳು.

ಒಂದು ದಿನ ಎಲ್ಕಾ ಯಾವುದೋ ಇಂಜೆಕ್ಷನ್ ಮಾಡಿಸಿಕೊಂಡಳು. ಆ ರಾತ್ರಿಯೆಲ್ಲಾ ಮಿರ್ ಅವಳ ಬಳಿ ಇರಬೇಕಾಗಿ ಬಂತು. ಆಗ ಎಲ್ಕಾ 'ನಾನು ಸತ್ತ ಮೇಲೆ ಡ್ರಿಸಿಕಾಳನ್ನು ಮದುವೆಯಾಗು' ಎಂದು ದುಂಬಾಲುಬಿದ್ದಳು. ಆದರೆ ಮಿರ್ ಎನಿತೂ ಒಪ್ಪಲಿಲ್ಲ. ಎಲ್ಕಾ ಆ ರಾತ್ರಿ ಅವನೊಂದಿಗೆ ದೊಡ್ಡದಾಗಿ ಗಲಾಟೆ ಮಾಡಿದಳು. ಆಗಲೇ ಫೋನು ಗಂಟೆ ಬಾರಿಸಿ ಸಾವಿನ ಸುದ್ದಿಯೊಂದನ್ನು ಹೊತ್ತು ಬಂದು ಆ ಇಕ್ಕಟ್ಟಿನಿಂದ ಬಿಡುಗಡೆ ಮಾಡಿತು. ಸ್ಯಾನಿಟೋರಿಯಮ್ಮಿನಲ್ಲಿ ಒಬ್ಬ ನಟಸಾರ್ವಭೌಮ ಸತ್ತಿದ್ದ. ಸೊಯಿಂಜಾ ರಸ್ತೆಯಲ್ಲಿ ಒಂದು ಅಂಗಡಿಯ ಕಟ್ಟಡ ಕುಸಿದು ಆರು ಮಕ್ಕಳು ಸತ್ತವು. ಸೋಪೋಲಿಫಿ ಬೀದಿಯಲ್ಲಿ ಒಬ್ಬ ಉರಿಯಲ್ಲಿ ಹಾರಿಕೊಂಡು ಸತ್ತ. ಎಲ್ಕಾ ಮಿರ್ರನನ್ನು ಕಾಡಿಸಿ ಪೀಡಿಸಿ ಆ ಸಾವುಗಳ ಎಲ್ಲಾ ವಿವರಗಳನ್ನು ಕೇಳಿ ತಿಳಿದುಕೊಂಡಳು. ನಟಸಾರ್ವಭೌಮನ ನಟನೆಯನ್ನು ಕೂಡ ಹೊಗಳಿದಳು.

ಮರುದಿನ ಮಿರ್ ಡ್ರಿಸಿಕಾರಿಬ್ಬರೂ ಹೆಣಗಳನ್ನು ಸಾಗಿಸುವುದರಲ್ಲಿ ತೊಡಗಿದರು. ಅವರಿಗೆ ಆ ದಿನ ತಿಂಡಿ ತಿನ್ನಲೂ ಅವಕಾಶವಿಲ್ಲ. ಡ್ರಿಸಿಕಾಳಿಗೆ ಮಕ್ಕಳು ಎಷ್ಟು ಹೃದಯ ವಿಕಾರವಾಗಿ ಸತ್ತವು ಎಂಬುದನ್ನು ವಿವರವಾಗಿ ಹೇಳಿದ ಮಿರ್. ಅವಳು ತನ್ನ ತುಟಿಗಳನ್ನು ಎರಡಾಗಿ ಸೀಳಿಸಲಿಲ್ಲ. ಎಲ್ಕಾಳಾಗಿದ್ದರೆ ಹೇಗಿರುತ್ತಿತ್ತೋ ಎಂದುಕೊಂಡ ಮಿರ್. ಈ ಮೂಗಳೊಂದಿಗೆ ಹದಿನೈದು ದಿನ ಕಳೆದರೆ ತನಗೆ ಹುಚ್ಚು ಹಿಡಿಯುವುದು ಖಾತ್ರಿ ಎಂದುಕೊಂಡ. ಅವನ ಮನಸ್ಸಿನಲ್ಲಿ ಎಲ್ಕಾ ಸುಳಿದಳು. ಎಲ್ಕಾಳ ಪ್ರತಿ ಮಾತು ಅವನನ್ನೂ ಗಾಸಿಗೊಳಿಸುತ್ತಿರುತ್ತೆ. ಆದರೂ ಎಲ್ಕಾಳ ಮಾತುಗಳೆಂದರೆ ಅವನಿಗಿಷ್ಟ.

ನಟಸಾರ್ವಭೌಮನ ಅಂತಿಮ ಯಾತ್ರೆಗೆ ಸಿದ್ಧಗೊಳಿಸಿದರು. ಶವಶಕಟವಾಗಿ ಅಲಂಕರಿಸಿದ ಕಾರಿನಲ್ಲಿ ನಟ ಸ್ಮಶಾನಕ್ಕೆ ಹೊರಟ. ಮಿರ್ ಕಾರನ್ನು ನಡೆಸುತ್ತಿದ್ದಾನೆ. ಕಾರು ಒಂದೆರಡು ಹಳ್ಳಿಗಳನ್ನು ದಾಟಿ ಮುಂದೆ ಸಾಗಿತು. ಡ್ರಿಸಿಕಾ ಪಕ್ಕದಲ್ಲೇ ಕಲ್ಲಿನಂತೆ ಕೂತಿದ್ದಾಳೆ. ಮಿರ್ರನಿಗೆ ಹುಚ್ಚು ಹೆಚ್ಚಾಯಿತು. ಕಾರು ಕಾಡಿನಲ್ಲಿ ಕಚ್ಚಾ ರಸ್ತೆ ದಾಟಿ ಡಾಂಬರಿನ ರಸ್ತೆಯೇರಿತು. ಮಿರ್ ತಾನೊಬ್ಬನೆ ಅಮೆರಿಕಕ್ಕೆ ಹೋಗಬೇಕೆಂದು ಮನದಲ್ಲೇ ತೀರ್ಮಾನಿಸಿಕೊಂಡ– ಅಲ್ಲಿ ಮಾತ್ರ ಹೆಣಗಳಿಗೂ ಹಣ್ಣುಗಳಿಗೂ ಬರವೇ? ಎಂದು ಪ್ರಶ್ನಿಸಿಕೊಂಡು. ಎಲ್ಕಾಳ ಮೇಲೆ ಅವನಿಗೆ ಎಲ್ಲಿಲ್ಲದ ಕೋಪ ಬಂತು. ಅಷ್ಟರಲ್ಲೇ ಹೆಮ್ಮರವೊಂದು ರಸ್ತೆಯ ನಡುವೆ ಇತ್ತು. ಎಲ್ಕಾಳ ಮಂಗಚೇಷ್ಟೆಯಲ್ಲಿ ಇದೊಂದು ಎಂದುಕೊಂಡು ಕಾರಿನ ವೇಗ ಹೆಚ್ಚಿಸಿದ. ಮರುಕ್ಷಣವೇ ಘೋರ ಶಬ್ದ ಕಿವಿ ಗಡಚಿಕ್ಕುವಂತೆ ಕೇಳಿ ಬಂತು. ನಂತರ ಎಲ್ಲವೂ ನಿಶ್ಶಬ್ದ.

ಮರುದಿನ ಆ ದಾರಿಯಲ್ಲಿ ಹೋಗುವ ದಾರಿಹೋಕರು ಅಲ್ಲಿ ನಜ್ಜುಗುಜ್ಜಾದ ಕಾರೊಂದನ್ನೂ ಮೂರು ಹೆಣಗಳನ್ನೂ ನೋಡಿದರು. ಶವಪೆಟ್ಟಿಗೆ ಮುರಿದುಕೊಂಡು ನಟನ ಶವ ರಸ್ತೆಯ ಮೇಲೆ ಜಿಗಿದು ಬಿದ್ದಿತ್ತು. ಡ್ರಿಸಿಕಾ ಮಿರ್ರರ ಶವಗಳು ಕಾರಲ್ಲೇ ಮುದುಡಿಕೊಂಡಿವೆ. ಈ ಸುದ್ದಿ ತಿಳಿಯುತ್ತಲೇ ಎಲ್ಕಾ ಹೊಟ್ಟೆ ಬಿರಿಯುವಂತೆ ನಕ್ಕಳು. ನಕ್ಕು ನಕ್ಕು ನಕ್ಕು, ನಗಲಾರದೆ ಆಯಾಸಗೊಂಡು ಮಲಗಿದಳು. ತನ್ನ ರೋಗವನ್ನು ಮರೆತು ಇಲ್ಲದ ಸೈರಣೆ ತಂದುಕೊಂಡು ಮಿರ್ ಡ್ರಿಸಿಕಾರ ದೇಹಗಳನ್ನು ಸ್ವಚ್ಛಗೊಳಿಸಿ ಖನನಕ್ಕೆ ಅಣಿಗೊಳಿಸಿದಳು.

ಆ ದಿನ ಊರಲ್ಲಿ ಎರಡು ಅಂತಿಮ ಯಾತ್ರೆಗಳು ಸಾಗಿದವು. ಒಂದರಲ್ಲಿ ನಟರು, ಬರಹಗಾರರು ಕಲಾವಿದರು ಮತ್ತವರ ಅಸಂಖ್ಯಾತ ಅಭಿಮಾನಿಗಳು ಇದ್ದರೆ ಇನ್ನೊಂದರಲ್ಲಿ ಮಿರ್ ಡ್ರಿಸಿಕಾರ ಗೆಳೆಯರು, ಕಳ್ಳರು ಬ್ರೋಕರರು, ವೇಶ್ಯೆಯರು ಇದ್ದಾರೆ. ಎಲ್ಕಾ ಕೂಡ ಅವರೊಂದಿಗಿದ್ದಾಳೆ. ಖನನಕ್ಕೆ ಮೊದಲು ಎಲ್ಕಾ ಮಿರನನ್ನು ಮಾತಾಡಿಸಿದಳು, "ಮಿರ್ ನಾನು ಅದಷ್ಟು ಬೇಗನೆ ನಿನ್ನ ಬಳಿಗೆ ಬರುವೆ? ನನಗಾಗಿ ಕೊಂಚ ತಡೆ. ನನ್ನ ಸಮಾಧಿ ನಿನ್ನದರ ಬಳಿಯೇ ಇದೆ. ನಾವಿಬ್ಬರೂ ಕಲೆತು ಬೆಳೆಸಿಕೊಂಡದ್ದನ್ನು ಯಾರೂ– ಕೊನೆಗೆ ಆ ದೇವನೂ– ನಮ್ಮಿಂದ ಕಸಿದುಕೊಂಡೊಯ್ಯುವುದು ಅಸಾಧ್ಯ" ಎನ್ನುತ್ತಲೇ ಕುಸಿದಳು.

# ಅಪರಾಧಿ ಪ್ರಜ್ಞೆ

## ಮತ್ತು

# ಮಾನಸಿಕ ರೋಗ

**ಗೋಪಾಲಕೃಷ್ಣ ಎಡನೀರು**

ಓರ್ವ ತನ್ನ ನೆರೆಮನೆಯವರ ತೆಂಗಿನಮರವನ್ನೇರಿ ತೆಂಗಿನಕಾಯಿ ಕದ್ದರೆ ಅದೊಂದು ಅಪರಾಧ. ಹೌದು. ಆದರೆ ಒಬ್ಬ ರಾಜ ನೆರೆ ರಾಜ್ಯದ ಮೇಲೆ ದಂಡೆತ್ತಿ ಹೋಗಿ ಕೈಗೆ ಸಿಕ್ಕಿದವರನ್ನೆಲ್ಲಾ ಕೊಂದು ಪುಂಡಾಟ ನಡೆಸಿದರೆ ಚರಿತ್ರೆ ಆತನನ್ನು ಮಹಾನ್ ವ್ಯಕ್ತಿ ಎಂದು ಹೊಗಳುತ್ತದೆ. ಇದು ಸಮಂಜಸವೇ? ರಾಜ ಒಂದು ವೇಳೆ ಸದುದ್ದೇಶದಿಂದ ಆಕ್ರಮಣ ನಡೆಸಿದರೆ ಅದು ತಪ್ಪು ಎನಿಸುವುದಿಲ್ಲ. ಸ್ವಪ್ರತಿಷ್ಠೆಗಾಗಿಯೋ ಯುದ್ಧಾಭಿಲಾಷೆಯಿಂದಲೋ ಆ ಕೆಲಸ ಮಾಡಿದ್ದರೆ ಆ ರಾಜ ಖಂಡಿತವಾಗಿಯೂ ಅಪರಾಧಿ. ಕರ್ತೃ ಅಥವಾ ಕರ್ಮ ಅಲ್ಲ. ಅದರ ಹಿಂದೆ ಅಡಗಿರುವ ಮಾನಸಿಕ ಭಾವನೆಗಳಾಗಿವೆ ತಪ್ಪಿಗೆ ಆಧಾರ ಅಥವಾ ಪ್ರೇರಣೆ. ಅಂತೆಯೇ ಕೊಲೆ ಮಾಡುವವನು ಅಪರಾಧಿ. ಅವನನ್ನು ಶಿಕ್ಷಿಸುವ ಅಧಿಕಾರಿಯಾಗಲಿ ಕಾನೂನಾಗಲಿ ಅಪರಾಧಿಯಲ್ಲ.

ಅಪರಾಧಗಳಲ್ಲಿ ಹಲವು ವಿಧಗಳಿವೆ. ವಂಚನೆ, ಕಳ್ಳತನ, ದರೋಡೆ, ಸುಲಿಗೆ ಮುಂತಾದವುಗಳು ಒಂದು ರೀತಿಯ ಅಪರಾಧ. ಬೀದಿ ಜಗಳ, ಹೊಡೆದಾಟ, ಚೂರಿ ಇರಿತ, ಕೊಲೆ ಹೀಗೆ ಇನ್ನೊಂದು ರೀತಿ. ವಿಸಿಲ್ ಹೊಡೆಯುವುದು, ಕಮೆಂಟಿಂಗ್, ವ್ಯಭಿಚಾರ, ಬಲಾತ್ಕಾರ ಮತ್ತೊಂದು ತರಹದ್ದಾದರೆ ಚಿತ್ರಹಿಂಸೆ, ಕಳ್ಳ ಸಾಗಣೆ, ಕಳ್ಳನೋಟು ಮುದ್ರಣ, ಕಲಬೆರಕೆ ಇಂತಹ ಪರಿಷ್ಕೃತ ಅಪರಾಧಗಳೂ ಇವೆ. ಆದರೆ ಇನ್ನು ಕೆಲವು ಅಪರಾಧ ಹೌದೋ ಅಲ್ಲವೋ ಎಂಬುದು ಇನ್ನೂ ತೀರ್ಮಾನವಾಗಬೇಕಷ್ಟೆ. ಉದಾಹರಣೆಗೆ ಭ್ರೂಣಹತ್ಯೆ, ಸಲಿಂಗರತಿ, ಆತ್ಮಹತ್ಯೆ ಇತ್ಯಾದಿ. ಭ್ರೂಣಹತ್ಯೆಯನ್ನು ಕೆಲವೊಮ್ಮೆ ಸರಕಾರವೇ ಮುಂದೆ ನಿಂತು ಮಾಡಿಸುವುದಿಲ್ಲವೇ? ಆದರೆ ಅದು ಅಪರಾಧವೂ ಹೌದು; ಅಪರಾಧವೂ ಅಲ್ಲ! ತನ್ನಿಂದಾಗಿ ತನಗೆ ಅಥವಾ ಇತರರಿಗೆ ಏನಾದರೂ ಹಾನಿಕರವಾದಂತಹ ಸಂಭವವೊಂದು ನಡೆದರೆ ಅದು ಅಪರಾಧ ಎಂದು ಪ್ರತಿಯೊಬ್ಬರಿಗೂ ಗೊತ್ತೇ ಇದೆ. ಆದರೆ ಇಂತಹ ಕೆಲಸಗಳು ಯಾರಿಗೆ ಹೇಗೆ ಹಾನಿಕರ ಎಂಬುದರ ಬಗ್ಗೆ ಇನ್ನೂ ಒಮ್ಮತ ಸಾಧಿಸಲ್ಪಡದೆ ಇರುವುದು.

ಮನಶ್ಶಾಸ್ತ್ರವನ್ನುಪಯೋಗಿಸಿ ನಡೆಸಿದ ಸಂಶೋಧನೆಗಳಿಂದ ಮತ್ತು ಅಪರಾಧಿಗಳ ಮೇಲೆ ನಡೆಸಿದ ಪರೀಕ್ಷೆಗಳಿಂದ ಅಪರಾಧಿಗಳ ವ್ಯಕ್ತಿತ್ವದಲ್ಲಿ ಹಲವು ಪ್ರತ್ಯೇಕತೆಗಳು ಇರುತ್ತವೆ ಎಂದು ತಿಳಿದುಬಂದಿದೆ. ಅಪರಾಧಿಗಳಲ್ಲಿ ಹೆಚ್ಚಾಗಿ ಕಂಡುಬರುವಂತಹ ಒಂದು ಪ್ರತ್ಯೇಕತೆ ಆಕ್ರಮಣಾಸಕ್ತಿ. ಅವರು ಭಾವನಾ ಪಕ್ವತೆಯಿಲ್ಲದವರೂ ಚಂಚಲತ್ವವುಳ್ಳವರೂ ತಪ್ಪು ಮಾಡಿಲ್ಲ ಎಂಬ ಬಾಲಿಶ ತಿಳುವಳಿಕೆಯುಳ್ಳವರೂ ಆಗಿರುತ್ತಾರೆ. ಆತ್ಮನಿಯಂತ್ರಣ ಶಕ್ತಿ ಅವರಿಗ ಇರುವುದಿಲ್ಲ. ಪ್ಯಾರಾನೋಯಿಯಾ, ಸಿಜೋಫ್ರೇನಿಯಾ ಮುಂತಾದ ಮಾನಸಿಕ ರೋಗಗಳಿಂದ ಬಳಲುವವರೂ ಹೆಚ್ಚಾಗಿ ಅಪರಾಧಗಳನ್ನು ನಡೆಸದೆ ಇರುವುದಿಲ್ಲ. ಎಲ್ಲಾ ವಿಧದ ಅಪರಾಧಿಗಳ ವ್ಯಕ್ತಿತ್ವದಲ್ಲೂ ಸಾದೃಶ್ಯ ಅಥವಾ ಸಮಾನತೆ ಕಂಡುಬರುವುದು

ಒಂದು ಗಮನಾರ್ಹ ವಿಷಯವಾಗಿದೆ. ಸಂಯಮ ರಹಿತನಾಗಿರುವುದು ಅಪರಾಧೀ ಪ್ರಜ್ಞೆಯ ಲಕ್ಷಣವಾಗಿರುತ್ತದೆ.

ಲೊಂಬ್ರೋಸೋ ಎಂಬೊಬ್ಬ ವಿಜ್ಞಾನಿ ಹಿಂದೆ ನಡೆಸಿದ್ದ ಒಂದು ಅಧ್ಯಯನದಿಂದ ಸಣ್ಣ ಹಣೆ, ಸಣ್ಣ ಕಿವಿಗಳು ಮುಂತಾದ ಶಾರೀರಿಕ ಪ್ರತ್ಯೇಕತೆಗಳು ಅಪರಾಧಿಗಳಿಗಿರುತ್ತವೆ ಎಂದು ಗೊತ್ತಾಗಿದೆ. ಶಾರೀರಿಕ ವೈಕಲ್ಯ, ದೃಷ್ಟಿಮಾಂದ್ಯ, ದಪ್ಪ ಶರೀರ, ಅಂಗಗಳಲ್ಲಿ ಹೋಲಿಕೆಯಿಲ್ಲದಿರುವುದು, ಎತ್ತರ ಕಡಿಮೆ ಮುಂತಾದ ವ್ಯತ್ಯಾಸಗಳು ಅಪರಾಧಿಗಳಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ಅವರಿಗೆ ಸಾಮಾನ್ಯವಾಗಿ ಶರೀರ ಬಲ ಹೆಚ್ಚು.

ಮಿದುಳಿಗೆ ಆಘಾತ, ಸಿಫಿಲಿಸ್, ಎನ್‌ಸಿಫಿಲಿಟಿಸ್ ಮುಂತಾದ ರೋಗಗಳಿಂದಾಗಿ ಆಕ್ರಮಣಾಸಕ್ತಿ ಹುಟ್ಟುತ್ತದೆ. ಮಾನಸಿಕ ರೋಗಿಗಳ ಮತ್ತು ಅಪರಾಧಿಗಳ ಮಿದುಳಿನಲ್ಲಿ ಉಂಟಾಗುವ ಅಲೆಗಳಿಗೆ ಬಹಳ ಸಾಮ್ಯ ಕಂಡುಬರುವುದು ಅಪರಾಧಿ ಪ್ರಜ್ಞೆಗೆ ಶಾರೀರಿಕ ತಹಳದಿ ಇದೆ ಎಂಬುದನ್ನು ಎತ್ತಿ ತೋರಿಸುತ್ತದೆ. ಅಪರಾಧಿಗಳಲ್ಲಿ ಅಪರೂಪಕ್ಕೆ ಬುದ್ಧಿವಂತರಿರಬಹುದಾದರೂ ಮಾನಸಿಕ ತೊಂದರೆ ಇರುವ ಅಪರಾಧಿಗಳೇ ಹೆಚ್ಚು. ಅವರ ಸರಾಸರಿ ಐ ಕ್ಯೂ (ಬುದ್ಧಿಯನ್ನು ಅಳೆಯುವ ಮಾನದಂಡ) ಸಾಧಾರಣ ವ್ಯಕ್ತಿಯ ಐ ಕ್ಯೂ ಗಿಂತ ತುಂಬಾ ಕಡಿಮೆ. ಅಂತಃಸ್ರಾವಿ ಗ್ರಂಥಿಗಳ ಪ್ರವರ್ತನೆಯಲ್ಲಿರುವ ತಕರಾರುಗಳು ಅಪರಾಧಿಗಳಲ್ಲಿ ಸಾಮಾನ್ಯ. ಕ್ರೋಮೋಸೋಮುಗಳ ಕೊರತೆಯಿರುವವರು ಹೆಚ್ಚಾಗಿ ಸಿಡುಕು ಸ್ವಭಾವಿಗಳಾಗಿದ್ದು ಆಕ್ರಮಣಾಸಕ್ತಿಯನ್ನು ತೋರಿಸುವುದರಿಂದಲೂ ಅಪರಾಧ ಮತ್ತು ಶಾರೀರಿಕ ಘಟಕಗಳ ಸಂಬಂಧವನ್ನು ಊಹಿಸಬಹುದು. ಉದಾಹರಣೆಗೆ ಪುರುಷರಲ್ಲಿ xy ಕ್ರೋಮೋಸೋಮಿಗೆ ಬದಲು ಪುರುಷತ್ವ ಹೀನವಾದ y ಕ್ರೊಮೋಸೋಮಿಗೆ ಒಂದು ಹೆಚ್ಚು ಸೇರಿಕೊಂಡು xyx ಕ್ರೊಮೋಸೋಮ್ ಉಂಟಾಗುವದು. ಒಂದೇ ಅಂಡದಲ್ಲಿ ಉಂಟಾಗುವ ಒಂದೇ ಪಾರಂಪರ್ಯವುಳ್ಳ ಅವಳಿ ಜವಳಿಗಳು ಒಂದೇ ತರದ ಕೆಲಸಗಳಲ್ಲಿ ಪಾತ್ರ ವಹಿಸುವುದು ಅಪರಾಧಿ ಪ್ರಜ್ಞೆಗೆ ಅನುವಂಶಿಕತೆಯು ಅಡಿಪಾಯವೂ ಇದೆ ಎಂಬುದನ್ನು ತೋರಿಸುತ್ತದೆ.

ಮಿದುಳಿನ ಅತಿ ಉನ್ನತ ವಲಯದಿಂದಾಗಿ ನಮಗೆ ಸ್ವನಿಯಂತ್ರಣ ಸಾಮರ್ಥ್ಯದ ಪ್ರಚೋದನೆಗಳು ಲಭಿಸುವುದು ಈ ವಲಯ ಪ್ರಚೋದನೆಗಳನ್ನು ಸೋಲಿಸುವಂತಹ ರೀತಿಯ ಮದ್ಯ ಮೊದಲಾದ ಪದಾರ್ಥಗಳು ಮನುಷ್ಯನನ್ನು ಮೃಗೀಯ ಸ್ಥಿತಿಗೆ ತಳ್ಳುತ್ತವೆ ಹಾಗೂ ಅಪರಾಧ ಕ್ರಿಯೆಗಳಿಗೆ ಪ್ರೇರಣೆ ನೀಡುತ್ತವೆ.

ಬಹಿರ್ಮುಖತ್ವ ಹೆಚ್ಚಾಗಿರುವವರಿಗೆ ಮಿದುಳಿನ ಉನ್ನತ ಕೇಂದ್ರಗಳಲ್ಲಿ ಅವರೋಧ ಥಕ್ಕನೆ ವರ್ಧಿಸುತ್ತದೆ. ಅಂಥವರು ಅಮಲು ಪದಾರ್ಥಗಳನ್ನು ಸೇವಿಸಿದಲ್ಲಿ ಬಹಳ ಬೇಗನೆ ಸಮತೋಲನ ತಪ್ಪಬಹುದು. ಅವರಿಗೆ ಶಾಂತವಾಗಿ ಕುಳಿತು ಹೆಚ್ಚು ಹೊತ್ತು ಓದಲೋ ಬರೆಯಲೋ ಸಾಧ್ಯವಿಲ್ಲ. ಈ ರೀತಿಯ ಸ್ವಭಾವವುಳ್ಳ ಮಕ್ಕಳಿಗೆ ವಿದ್ಯೆ ಕಲಿಸುವುದು ತುಂಬಾ ಕಷ್ಟ. ಅವರಿಗೆ ಸ್ವಂತ ನಿಲುವು ಅಥವಾ ನಿರ್ಧಾರ ತೆಗೆದುಕೊಳ್ಳಲು ತುಂಬಾ ಸಮಯ ಹಿಡಿಯಬಹುದು. ಚಂಚಲತ್ವ ತೀರಾ ಸಾಮಾನ್ಯ. ಅದರಿಂದಾಗಿ ಬಹಿರ್ಮುಖತ್ವವುಳ್ಳವರಿಗೆ ಪ್ರಾಯವಾದಂತೆ ಸಾಮಾಜಿಕ ಕಟ್ಟಳೆ ವಿಧಿಗಳಿಗೆ ತಕ್ಕಂತೆ ನಡೆದುಕೊಳ್ಳಲು ಸಾಧ್ಯವಾಗದಿರುವುದು.

ನಿರಾಶೆ, ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಸಾಧ್ಯವಿಲ್ಲದೇ ಹೋದಾಗಿನ ಒಂದು ಅವಸ್ಥೆ ಜೀವನದ ಮೇಲಿರುವ ನಿರಾಶೆ ಮನುಷ್ಯನಿಂದ ಏನನ್ನೂ ಮಾಡಿಸಲು ಶಕ್ತವಾಗಬಲ್ಲದು. ಬಾಲ್ಯ ಜೀವನದ ತೀಕ್ಷ್ಣ ಅನುಭವಗಳು ಹಗೆ ತೀರಿಸಲು ಅಸಾಧ್ಯವಾದ ಸೇಡು ಮುಂತಾದವುಗಳೆಲ್ಲಾ ಒಬ್ಬ ವ್ಯಕ್ತಿಯನ್ನು ಸಂಪೂರ್ಣ ಬದಲಾಯಿಸಬಹುದು. ಅಂಗವಿಕಲತೆಗಳಿಂದ ಹುಟ್ಟುವಂತಹ ಕೀಳು ಮನೋಭಾವ ಕೂಡ ಇದರಲ್ಲಿ ಸೇರುತ್ತದೆ.

ಯಾವುದೇ ಕುಟುಂಬದಲ್ಲಿ ಹುಟ್ಟಿರುವಂತಹ ಒಂದು ಮಗುವಿನ ಮಾನಸಿಕ ಬೆಳವಣಿಗೆಗೆ ಆ ಕುಟುಂಬದಲ್ಲಿ ಸ್ನೇಹ, ಸೌಹಾರ್ದ, ಸಂತೋಷ ತುಂಬಿರಬೇಕಾದ್ದು ತೀರಾ ಅಗತ್ಯ. ಸದಾ ಜಗಳ ಮಾಡುತ್ತಿರುವ ತಂದೆ-ತಾಯಿ, ಹೆಂಡ ಕುಡಿದು

ಕೆಟ್ಟ ಭಾಷೆಯಲ್ಲಿ ಬಯ್ಯುವ ತಂದೆ, ವ್ಯಭಿಚಾರಿ ವರ್ತನೆಯುಳ್ಳ ತಾಯಿ, ಕಳ್ಳತನದಿಂದ ಜೀವಿಸುವ ಅಣ್ಣಂದಿರು ಉಳ್ಳ ಒಂದು ಕುಟುಂಬದಲ್ಲಿ ಬೆಳೆದು ಬಂದ ಒಂದು ಮಗು ಅಪರಾಧಿ ಮನೋಭಾವವನ್ನು ತೋರಿಸದೇ ಇದ್ದರೆ ಅಥವಾ ತಪ್ಪು ಮಾಡದೇ ಇದ್ದರೆ ಅದೊಂದು ಅದ್ಭುತ ಎನಿಸೀತು! ಚಿಕ್ಕವರಿರುವಾಗ ತಂದೆ-ತಾಯಿಗಳ ಪ್ರೀತಿ ಉಪಚಾರಗಳು ಸಾಕಷ್ಟು ಲಭಿಸದೆ ಇದ್ದವರು ಸ್ನೇಹಕ್ಕೆ ಹೊರತಾಗಿ ಕಳ್ಳತನಕ್ಕೆ ವಂಚನೆಗೆ ಇರುವ ಮಾರ್ಗವನ್ನು ಕಂಡುಹಿಡಿಯಬಹುದು. ಮಗುವೊಂದರ ಶಿಕ್ಷಣದಲ್ಲಿ ಹತ್ತವರ ಜವಾಬ್ದಾರಿ ತುಂಬಾ ಇದೆ. ಅದರಿಂದಾಗಿ ಹತ್ತವರ ಸಂಪರ್ಕವಿಲ್ಲದೆ ಬೆಳೆದ ಮಕ್ಕಳಿಗೆ ತಪ್ಪೊಪ್ಪುಗಳ ಅರಿವು ಇಲ್ಲದಿರುವುದು ಹಾಗೂ ನೇರಹಾದಿಯಲ್ಲಿ ನಡೆವ ಸಾಮರ್ಥ್ಯ ಕುಂಠಿತವಾಗುವುದು. ಕೆಲವೊಮ್ಮೆ ಪ್ರಚಾರಶಕ್ತಿಯೂ ಅಪರಾಧಕ್ಕೆ ಕೈಹಾಕುವಂತೆ ಪ್ರೇರೇಪಿಸಬಹುದು. ಯಾವ ವಿಧದಲ್ಲೂ ಜನರ ಗಮನವನ್ನು ತನ್ನೆಡೆಗೆ ಆಕರ್ಷಿಸಲು ವಿಫಲವಾಗುವ ವ್ಯಕ್ತಿ ತಪ್ಪು ಮಾಡುವುದರ ಮೂಲಕ ಆಕರ್ಷಣೀಯ ಎನಿಸಲು ಶ್ರಮಿಸುತ್ತಾನೆ.

ಬಡತನ, ಕೊಳಚೆ ಪ್ರದೇಶಗಳ ಅನಾರೋಗ್ಯಕರ ವಾತಾವರಣ, ಕೆಟ್ಟ ಸಹವಾಸ, ನಿರುದ್ಯೋಗ, ಅಶ್ಲೀಲ ಸಾಹಿತ್ಯ ಇವುಗಳೆಲ್ಲ ಅಪರಾಧಿಗಳನ್ನು ಬೆಳೆಸುವುದರಲ್ಲಿ ಮಹತ್ತರ ಪಾತ್ರ ವಹಿಸುತ್ತವೆ. ಪತ್ರಿಕೆಗಳು ಮತ್ತು ಇನ್ನಿತರ ಪ್ರಸಾರ ಮಾಧ್ಯಮಗಳು ದುಷ್ಟ ಪ್ರವರ್ತನೆಗಳಿಗೆ ಅಮಿತ ಉತ್ಸಾಹ ತೋರಿಸುವುದು. ಬಾಲ ಮನಸ್ಸುಗಳಲ್ಲಿ ಕೆಟ್ಟ ಭಾವನೆಗಳು ಹುಟ್ಟಲು ಕಾರಣವಾಗುತ್ತವೆ. ಆ ಮೇಲೆ ಸಿನಿಮಾ ಸ್ಟಂಟ್






ಕತ್ತಿವರಸೆ, ಕರಾಟೆ, ಹೊಡೆದಾಟ, ಜೆಟ್ಟಿ ಗುದ್ದ ಗಳಲ್ಲಿ ಉರುಳಾಟ, ಬೋಟು ಹೆಲಿಕಾಪ್ಟರುಗಳಲ್ಲಿ ಸರ್ಕಸ್ಸು ದರೋಡೆಖೋರರ ಮತ್ತು ಕಳ್ಳಸಾಗಾಣಿಕೆದಾರರ ಹಲವು 'ಟೆಕ್ನಿಕ್'ಗಳನ್ನು ತೋರಿಸುವುದು ಇವನ್ನೆಲ್ಲಾ ಹೆಚ್ಚಾಗಿ ಸಿನಿಮಾ ಮೂಲಕ ನೋಡು ಕಲಿತು ಪ್ರದರ್ಶಿಸಿ ಅಪರಾಧಿಗಳಾಗುವುದೂ ಇದೆ. ಇದನ್ನು ಸ್ವತಃ ಅಪರಾಧಿಗಳೇ ಒಪ್ಪಿಕೊಂಡಿದ್ದಾರೆ. ಬೆಳೆಯುತ್ತಿರುವ ಜನಸಂಖ್ಯೆ, ನಿರ್ದಿಷ್ಟ ಕ್ರಮವಿಲ್ಲದ ಜೀವನ, ಒಣ ಆಶ್ವಾಸನೆಗಳು, ವಂಚನೆಯ ಹಲವು ವೇಷಗಳು, ತಾತ್ವಿಕ ಮಂಥನಗಳಲ್ಲಿ ನಿರಾಸಕ್ತಿ, ಭೌತಿಕ ಸುಖದ ಮೇಲಿರುವಂಥ ಸ್ವಾರ್ಥ, ಇಂದ್ರಿಯ ಸುಖಕ್ಕಾಗಿ ಯಾವ ಬೆಲೆಯನ್ನಾದರೂ ಕೊಟ್ಟೇನು ಎಂಬ ಭಾವನೆ ಜೀವನದ ಉದ್ದೇಶವನ್ನು ಕಂಡುಕೊಳ್ಳದೇ ಇರುವುದು ಮುಂತಾದವುಗಳು ಕೂಡ ಜನರನ್ನು ತಪ್ಪು ಕೆಲಸ ಮಾಡುವಂತೆ ಪ್ರಚೋದಿಸುವ ಸಾಧ್ಯತೆ ಇದೆ.

ಶಿಕ್ಷೆಯ ಮೇಲಿರುವ ಭಯ ಮನುಷ್ಯನನ್ನು ಅಪರಾಧ ಮಾಡದಂತೆ ಪ್ರೇರೇಪಿಸಲು ಕಾರಣವಾಗುವ ಒಂದು ಘಟಕ. ಆದರೆ ಒಮ್ಮೆ ಅಪರಾಧಿ ಎನಿಸಿ ಶಿಕ್ಷಿಸಲ್ಪಟ್ಟ ಓರ್ವನನ್ನು ಆ ಶಿಕ್ಷೆ ಮತ್ತೂ ಅತನಿಂದ ಅಪರಾಧಗಳನ್ನು ಮಾಡಿಸುತ್ತದೆ. ನಮ್ಮ ಶಿಕ್ಷೆಗಳ ಗುಣ ಮಟ್ಟ ಹಾಗೆ. ಅತ ನೇರಹಾದಿಯಲ್ಲಿ ನಡೆಯಲು ಪ್ರೇರಕವಾದಂಥ ಬೇರೆ ಹಲವು ಶಿಕ್ಷೆಗಳನ್ನು ಜಾರಿಗೊಳಿಸಬೇಕು. ವಿದ್ಯಾಭ್ಯಾಸದಲ್ಲಿ ಮಕ್ಕಳ ಗುಣ ನಡತೆ ತಿದ್ದುವುದಕ್ಕೂ ಶೀಲವಂತ ಪ್ರಜ್ಞೆ ಬೆಳೆಸುವುದಕ್ಕೂ ಪ್ರತ್ಯೇಕ ಶ್ರದ್ಧೆ ವಹಿಸಬೇಕು. ಸಹಾಯ ಮನೋಭಾವ ಬೆಳೆಯುವಂತೆ ಮಾಡಬೇಕು. ಲಲಿತ ಕಲೆ, ಪೌರಧರ್ಮ, ಸಂಸ್ಕೃತಿ ಮೊದಲಾದವುಗಳಿಗೆ ಪ್ರಾಧಾನ್ಯ ನೀಡಬೇಕು. ವೃತ್ತಿಪರ ಶಿಕ್ಷಣವನ್ನು ಹೆಚ್ಚಿಸಬೇಕು. ಬಹಿರ್ಮುಖತ್ವ ಮತ್ತು ಎಗರಿಬೀಳುವ ಸ್ವಭಾವವುಳ್ಳ ಮಕ್ಕಳಿಗೆ ಸೌಮ್ಯತೆ ಮತ್ತು ಬುದ್ಧಿ ಕಲಿಸುವುದರಲ್ಲಿ ಹೆತ್ತವರು, ಅಧ್ಯಾಪಕರು ಹೆಚ್ಚು ಗಮನ ಹರಿಸಬೇಕು. ಮಾನಸಿಕ ಸಮಸ್ಯೆಗಳನ್ನು ಪರಿಹರಿಸಲು ಸಹಾಯಕವಾದ ಸಲಹಾ ಮಂಡಳಗಳನ್ನು ಎಲ್ಲಾ ಕೇಂದ್ರಗಳಲ್ಲೂ ಸ್ಥಾಪಿಸಬೇಕು. ಪಾರ್ತೆ ಮತ್ತು ಸಿನಿಮಾಗಳನ್ನು ಸಮರ್ಪಕವಾದ ರೀತಿಯಲ್ಲಿ ಸೆನ್ಸಾರ್ ಮಾಡಬೇಕು. ಮದ್ಯ ನಿಷೇಧ ಜಾರಿಗೆ ತಂದರೆ ಎಲ್ಲಾ ಪ್ರಯತ್ನಗಳಿಗೂ ಹಾದಿ ಸುಗಮವಾಗುತ್ತದೆ. ಶಾರೀರಿಕ ಅಭ್ಯಾಸ ಮತ್ತು ಮಾನಸಿಕ ಉಲ್ಲಾಸಕ್ಕೆ ಬೇಕಾದ ಸೌಕರ್ಯಗಳು ಪ್ರತಿಯೊಬ್ಬನಿಗೂ ಸಿಗುವಂತಾಗಬೇಕು. ರಾಷ್ಟ್ರದ ಸಾಂಪತ್ತಿಕ ಅಭಿವೃದ್ಧಿಯನ್ನು ತ್ವರಿತಗತಿಯಲ್ಲಿ ಸಂಪಾದಿಸಬೇಕಾದರೆ ಮೊದಲು ನೈತಿಕ ಅಭಿವೃದ್ಧಿ ಆಗಬೇಕಾದ್ದು ಅಗತ್ಯವಲ್ಲವೇ?"

## ಮಾನಸಿಕ ಮಾಂದ್ಯ

ಸರಾಸರಿ ಮಟ್ಟಕ್ಕಿಂತ ಕಡಿಮೆ ಮಾನಸಿಕ ಪ್ರವರ್ತನೆಯುಳ್ಳ ಹಾಗೂ ಯಾವುದೇ ಕೆಲಸವನ್ನು ಸ್ವಂತವಾಗಿ ಮಾಡಲು ಸಾಧ್ಯವಿಲ್ಲದಿರುವ ಅಸಾಮರ್ಥ್ಯವನ್ನು ಮಾನಸಿಕ ಮಾಂದ್ಯ ಎಂದು ತಿಳಿಯಲಾಗುವುದು. ೭೫ ಕ್ಕಿಂತ ಕಡಿಮೆ ಐ ಕ್ಯೂ ಉಳ್ಳವರು ಮಾಂದ್ಯತೆ ಇರುವವರು ಎಂದು ತಿಳಿಯಲ್ಪಡುತ್ತಾರೆ. ೭೦ಕ್ಕೂ ಕಡಿಮೆ ಇರುವವರಂತೂ ಸ್ವಂತ ಕೆಲಸಗಳನ್ನು ಮಾಡಲೂ ಅಸ–ಮರ್ಥರಾಗಿರುತ್ತಾರೆ. ಈ ಅಳತೆ ಎಷ್ಟು ಕಡಿಮೆಯಾದರೂ ಅದರ ಕಾರಣ ಜೀವಶಾಸ್ತ್ರೀಯವೇ ಆಗಿರುತ್ತದೆ. ಶರೀರದ ರಾಸಾಯನಿಕ ಕ್ರಿಯೆಗಳ ತೊಂದರೆಯೋ ಮಿದುಳಿನ ಯಾವುದಾದರೂ ರೋಗವೋ ಅದಕ್ಕೆ ಕಾರಣವಾಗಬಹುದು. ಭ್ರೂಣದ ಬೆಳವಣಿಗೆಯ ಘಟ್ಟದಲ್ಲಿಯೇ ಹೆಚ್ಚಾಗಿ ಅಂಥ ತಕರಾರುಗಳು ಆರಂಭವಾಗುವುದು. ಮಗು ಗರ್ಭಸ್ಥವಾಗಿರುವಾಗ ತಾಯಿಗೆ ಅಂಟುವ ರೋಗಗಳು ಸೇವಿಸುವ ಔಷಧಗಳು ಮತ್ತು ಮಾದಕ ವಸ್ತುಗಳು ಮೊದಲಾದವುಗಳೂ ಮಾನಸಿಕ ಮಾಂದ್ಯಕ್ಕೆ ಕಾರಣವಾಗುತ್ತವೆ.

ಆರಂಭ ಹಂತದಲ್ಲೇ ಪರಿಣಾಮಕರವಾಗಿ ಚಿಕಿತ್ಸಿಸಿದರೆ ಇದನ್ನು ಗುಣಪಡಿಸಬಹುದು. ಭ್ರೂಣಾವಸ್ಥೆಯಲ್ಲಿ ಆಕ್ರಮಿಸುವ ರೋಗಗಳಲ್ಲಿ ಮುಖ್ಯವಾದುವು ಫೀನೈಲ್ ಕೆಟೋನ್ ಯೂರಿಯಾ (ಒಂದು ತರದ ಮೂತ್ರರೋಗ) ಮತ್ತು ಗ್ಯಾಲಕ್ಟೋಸೆಮಿಯಾಗಳಾಗಿವೆ. ಇದನ್ನು ಕಂಡು ಹಿಡಿಯುವ ಹಾಗೂ ಚಿಕಿತ್ಸಿಸುವ ಸಾಮರ್ಥ್ಯ

ಇಂದು ವಿಜ್ಞಾನಕ್ಕಿದೆ. ಆದರೆ ಮಿದುಳಿಗೆ ತೊಂದರೆ ಬಂದು ಉಂಟಾಗುವ ವೈಕಲ್ಯವನ್ನು ಗುಣಪಡಿಸಲು ಸಾಧ್ಯವಿಲ್ಲ. ಸ್ವಂತ ಕೆಲಸಗಳನ್ನು ನಿರ್ವಹಿಸಲು ಅಸಾಧ್ಯವಾದಂಥ ಮಾನಸಿಕ ಮಾಂದ್ಯವಿದ್ದರೆ ಅವರಿಗಾಗಿಯೇ ಇರುವ ಸಂಸ್ಥೆಗಳಲ್ಲಿ ಅವರನ್ನು ಸೇರಿಸಬೇಕು. ಅವರಿಗೆ ಪ್ರೀತಿ, ಸಹಕಾರಗಳ ಅಗತ್ಯವೇ ಹೆಚ್ಚು. ಅದೇ ಅವರಿಗೆ ನೀಡಬಹುದಾದ ಚಿಕಿತ್ಸೆ.

## ನ್ಯೂರೋಸಿಸ್

ಸಂಘರ್ಷವೆಂಬುದು ಮಾನಸಿಕ ಸಮತೋಲನವನ್ನು ತಪ್ಪಿಸುತ್ತದೆ ಎಂಬುದು ಎಲ್ಲರಿಗೂ ತಿಳಿದಿರುವ ಸಂಗತಿ. ಮಾನಸಿಕ ಆರೋಗ್ಯವಿರುವವನಿಗೆ ಆ ಜಂಜಾಟವನ್ನು ಮೆಟ್ಟಿ ನಿಲ್ಲುವ ಶಕ್ತಿ ಇದೆ. ನಿರ್ಧಾರ ಹೊಂದಿ ಆ ಪ್ರಕಾರ ನಡೆದುಕೊಳ್ಳುವ ಸಾಮರ್ಥ್ಯ ಇದೆ. ಆದರೆ ನ್ಯೂರೋಸಿಸ್ ಬಾಧಿಸಲ್ಪಟ್ಟವರಿಗೆ ಮಾನಸಿಕ ಘರ್ಷಣೆಯನ್ನು ಪರಿಹರಿಸುವ ಸಾಮರ್ಥ್ಯವಿರುವುದಿಲ್ಲ. ನ್ಯೂರೋಸಿಸ್ ಅವರಲ್ಲಿರುವ ಸಂಘರ್ಷವನ್ನು ಬೇರೂರಿಸುತ್ತದೆ. ಅಂಥವರಿಗೆ ಉದ್ವೇಗ ಆತುರ ಹೆಚ್ಚು ಇರುತ್ತದೆ. ಅದು ಆ ಮಾನಸಿಕ ಸಂಘರ್ಷವನ್ನು ಇಲ್ಲದೆ ಕೊನೆಗೊಳಿಸಬೇಕೆಂಬ ಉತ್ಸಾಹದಿಂದಾಗಿರಬಹುದು.

ನ್ಯೂರೋಸಿಸ್ ಬಾಲ್ಯಕಾಲದಿಂದ ಮೊದಲ್ಗೊಂಡು ಬರುವಂಥದ್ದಾಗಿದೆ. ಇದನ್ನು ಅಂಟಿಸಿಕೊಂಡವ ತೀರಾ ಸ್ವಾಭಾವಿಕವ ಸ್ನೇಹ ದ್ವೇಷ ಭಾವನೆಗಳನ್ನು ಆತ ಆಘಾತಕಾರಿಯಾಗಿ ಪರಿಗಣಿಸಲು ತೊಡಗುತ್ತಾನೆ. ಕ್ರಮೇಣ ಅದನ್ನೇ ಮನಸ್ಸಿನಲ್ಲಿ ಹುದುಗಿಸಲು ಪ್ರಯತ್ನಿಸುತ್ತಾನೆ. ಮಾಡಬೇಕೆಂದು ತೋರುವುದೋ ಮಾಡಲು ಹೆದರುವುದೋ ಬೇಡವೆಂದು ತಿರಸ್ಕರಿಸುವುದೋ ಮಾಡುತ್ತಾನೆ. ಇದು ನ್ಯೂರೋಸಿಸ್ ಬೆಳೆಯುವುದರ ಲಕ್ಷಣ. ಅವನಿಗೆ ಕೂಡ ತಿಳಿಯಲು ಅಥವಾ ನಿಯಂತ್ರಿಸಲು ಸಾಧ್ಯವಾಗದ ರೀತಿಯಲ್ಲಿ ಅದು ಬೆಳೆಯುವುದು. ಜೀವನದ ಒಂದಕ್ಕಿಂತ ಹೆಚ್ಚಿನ ವಲಯಗಳಲ್ಲಿ ಪ್ರವರ್ತಿಸುವ ಸಾಮರ್ಥ್ಯ ಕುಂಠಿತವಾಗುವುದು. ಇದರ ಪ್ರತ್ಯಾಘಾತಗಳು ವೇದನಾಜನಕ ಎನ್ನುವುದಕ್ಕಿಂತಲೂ ಅತಿ ಭಯಂಕರ ಎನ್ನಬಹುದು.

ನ್ಯೂರೋಸಿಸ್‌ಗೆ ಶಾರೀರಿಕವಾದ ಲಕ್ಷಣಗಳಿವೆ. ಬೆವರುವುದು, ತಲೆ ಸಿಡಿಯುವದು, ಹೊಟ್ಟೆ ನೋವು, ಶ್ವಾಸೋಚ್ಛ್ವಾಸದಲ್ಲಿ ವಿಷಮತೆ, ಹೃದಯ ವೇದನೆ ಮುಂತಾದ ಗೋಚರ ಅಗೋಚರ ಲಕ್ಷಣಗಳು ಕಂಡುಬರುತ್ತವೆ. ಶರೀರ ಒಂದು ಆಕ್ರಮಣವನ್ನು ಎದುರಿಸಬೇಕಾಗಿ ಬರಬಹುದು ಎಂಬುದರ ಸೂಚನೆಗಳಾಗಿವೆ. ಇವು ಕೆಲವು ಸಂದರ್ಭಗಳಲ್ಲಿ ಕೆಲವು ಶಾರೀರಿಕ ಕ್ರಿಯೆಗಳು ನಿಂತೇ ಹೋಗುತ್ತವೆ. ಅಸ್ಪಷ್ಟ ಭಾವನೆಗಳನ್ನು ಮಾತ್ರ ಆಗ ಕಾಣಬಹುದಷ್ಟೇ. ಅದು ಬಾಹ್ಯ ಆಘಾತವಲ್ಲ. ಮನುಷ್ಯ ಶರೀರದ ಒಳಗೆಯೇ ಬರಬಹುದಾದ ತೊಂದರೆ. ಅದು ಕೆಲವೊಮ್ಮೆ ಮನಸ್ಸಿನ ಅರಿವಿಗೇ ಸಿಕ್ಕಂತೆ ಆಗಿರಬಹುದು. ನ್ಯೂರೋಸಿಸ್‌ನಲ್ಲಿ ಹಲವು ತರಹದವುಗಳಿವೆ.

## ಸೈಕೋಸಿಸ್

ಭಾವನೆ ಮತ್ತು ಮಾನಸಿಕ ಪ್ರಕ್ರಿಯೆಗಳೊಂದಿಗೆ ಸಂಬಂಧಹೊಂದಿದ ಹಲವು ಶಾರೀರಿಕ ರೋಗಗಳೂ ಇವೆ. ಅವುಗಳನ್ನು ಸೈಕೊಸೋಮ್ಯಾಟಿಕ್ ರೋಗಗಳು ಎನ್ನುತ್ತಾರೆ. ಸಮಸ್ಯೆಗಳನ್ನು ಶರೀರದ ಮೂಲಕ ಪರಿಹರಿಸಲು ಪ್ರಯತ್ನಿಸುವಂತಾಗಿದೆ. ಅದು ಹೆಚ್ಚಾಗಿ ಬಾಧಿಸುವುದು ಅನೈಚ್ಛಿಕ ನಾಡಿವ್ಯೂಹದ ನಿಯಂತ್ರಣಕ್ಕೊಳಪಟ್ಟ ದಹನೇಂದ್ರಿಯ ವ್ಯೂಹ ಅಂತಃಸ್ರಾವಿಗಳು. ಹೃದಯ, ಮೂತ್ರಕೋಶ ಮೊದಲಾದ ಶರೀರ ಭಾಗಗಳನ್ನು ಈ ರೋಗ ಆಕ್ರಮಿಸುವುದು. ನ್ಯೂರೋಸಿಸ್ ಬಾಧಿಸಲ್ಪಟ್ಟವರಂತೆ ಸೈಕೊಸಿಸ್ ರೋಗಿಗಳು ತಮ್ಮ ಅಂತಃ ಸಂಘರ್ಷವನ್ನು ಸ್ವಂತವಾಗಿ ಎದುರಿಸುವ ಸಾಮರ್ಥ್ಯವುಳ್ಳವರಲ್ಲ. ಆ ವೈಫಲ್ಯ ಶರೀರದ ಇತರ ಅಂಗಗಳ ಕಾರ್ಯದ ವೈಕಲ್ಯದ ಮೂಲಕ ಬಹಿರಂಗವಾಗುವುದು.

ಉದರವ್ರಣವು ಪ್ರಧಾನವಾದ ಸೈಕೋಸಿಸ್ ರೋಗ. ಭಾವನೆಗಳ ಸಂಘರ್ಷದಿಂದಾಗಿ ಆಮ್ಲಗುಣವುಳ್ಳ ಜಠರ ರಸ ಉತ್ಪತ್ತಿಯಾಗುತ್ತದೆ. ಆಮಾಶಯದಲ್ಲಿ ಆಹಾರ ಇಲ್ಲವಾದರೆ ಅದು

ಆಮಾಶಯದ ಒಳಭಿತ್ತಿಯನ್ನು ಆಕ್ರಮಿಸುತ್ತದೆ. ಕ್ರಮೇಣ ಅಲ್ಲಿ ವ್ರಣವುಂಟಾಗುತ್ತದೆ ಈ ರೋಗ ಶಾರೀರಿಕವಾದ್ದರಿಂದ ಶಾರೀರಿಕ ಚಿಕಿತ್ಸೆಯೂ ಅಗತ್ಯವಿದೆ.

ಸೈಕೋಸಿಸ್ ರೋಗಗಳಲ್ಲೂ ಹಲವು ತರದವುಗಳಿವೆ. ಪ್ರತಿಯೊಂದು ರೋಗಕ್ಕೂ ಅದರದೇ ಆದ ವೈಶಿಷ್ಟ್ಯವಿದೆ. ಸಿಸ್ಟೋನಿಯಾ ಬಾಧಿಸಲ್ಪಟ್ಟ ಮಕ್ಕಳು ನಾಚಿಕೆ ಸ್ವಭಾವದವರೂ ಕನಸು ಕಟ್ಟುತ್ತಾ ಕುಳಿತಿರುವವರೂ ಸಿಟ್ಟು ಹೆಚ್ಚಾಗಿರುವವರೂ ಆಗಿರುತ್ತಾರೆ. ಕೆಲಸ ಮಾಡುವ ಸಾಮರ್ಥ್ಯ ಅಥವಾ ಸಮಾಜದೊಡನೆ ಹೊಂದಿಕೊಂಡು ಹೋಗುವಂತಹ ಸಾಮರ್ಥ್ಯ ಇರುವುದಿಲ್ಲ. ಒಂದೇ ಸ್ಥಿತಿಯಲ್ಲಿ ಹಲವು ಘಂಟೆಗಳ ತನಕ ಕುಳಿತಿರಲು ಅವರಿಗೆ ಸಾಧ್ಯವಿದೆ. ವಿಚಿತ್ರವಾದ ಅಂಗಪ್ರದರ್ಶನವನ್ನೂ ಕಾಣಬಹುದು. ಕೆಲವೊಮ್ಮೆ ಕೆಲವು ವಿಭಾಗದ ಜನರು ಅದನ್ನೆ ಪವಾಡವೆಂದೂ ದೈವಾನುಗ್ರಹವೆಂದೂ ನಂಬುವ ಸಾಧ್ಯತೆಯೂ ಇದೆ. ಪ್ಯಾರಾನೋಯಿಯಾ ಬಾಧಿಸಲ್ಪಟ್ಟವರಿಗೆ ತಪ್ಪು ತಿಳುವಳಿಕೆಗಳೂ ಸುಳ್ಳು ನಂಬಿಕೆಗಳೂ ಹೆಚ್ಚಿರುತ್ತವೆ. ಯುಕ್ತಿ ಗೊತ್ತಿರುವುದಿಲ್ಲ. ಮುಂಗೋಪವಂತೂ ಸರ್ವಸಾಮಾನ್ಯ. ಚಿಕ್ಕಂದಿನಿಂದಲೇ ಬೆಳೆದು ಬರುವ ಅಸಹಾಯತನದ ಪರಿಣಾಮ ಈ ಮುಂಗೋಪ.

ಆತ್ಮಹತ್ಯೆಯನ್ನು ಪ್ರೇರಿಸುವಂತಹ ಸೈಕೋಸಿಸ್ ರೋಗವು ಇದೆ. ಈ ರೋಗಿಗಳು ಪದೇ ಪದೇ ಆತ್ಮಹತ್ಯೆಯ ಬೆದರಿಕೆಯನ್ನೊಡ್ಡುತ್ತಾ ಇರುತ್ತಾರೆ. ಅಂದರೆ ತಾನು ಸಹಾಯ ಯಾಚಿಸುತ್ತಿದ್ದೇನೆ ಎಂದು ಅದರರ್ಥ. ಔಷಧಿಯ ಅತಿ ಸೇವನೆ, ಜ್ವರ, ರಕ್ತನಾಳಗಳ ಕಠಿಣತೆಯಿಂದಾಗಿ ಮಿದುಳಿನ ಮೇಲಾಗುವ ಆಘಾತಗಳಿಂದ ಮಿದುಳು ಶಕ್ತಿಹೀನವಾದಾಗ ಇಂಥ ಸೈಕೋಸಿಸ್‌ಗಳು ಕಂಡುಬರುತ್ತವೆ.

ಈ ಮಾನಸಿಕ ರೋಗಿಗಳಿಗೆ ಸಂಪೂರ್ಣ ಪರಿಹಾರವನ್ನು ಕಂಡುಹಿಡಿಯಲು ಯಾವ ವೈದ್ಯಶಾಸ್ತ್ರಕ್ಕೂ ಸಾಧ್ಯವಾಗಿಲ್ಲ. ಆದರೆ ಮಾನಸಿಕ ರೋಗಕ್ಕೆ ಶಾರೀರಿಕ ಕಾರಣಗಳು ಇದ್ದೇ ಇವೆ ಎಂಬುದು ವ್ಯಕ್ತವಾಗಿದೆ.

ಮಾನಸಿಕ ರೋಗಗಳು ಎಂತಹ ಸಾಮಾನ್ಯ ವ್ಯಕ್ತಿಯನ್ನಾದರೂ ಕಿಂಚಿತ್ ಬಾಧಿಸದೆ ಇರುವುದಿಲ್ಲ. ಅದಕ್ಕೆ ಪ್ರಾರಂಭದಲ್ಲೇ ಚಿಕಿತ್ಸೆ ಅಗತ್ಯ.

ನಮ್ಮ ಮೇಲೆ ಅನುಕಂಪವಿರುವ ಗೆಳೆಯ ಬಂಧು ಡಾಕ್ಟರ್ ಮೊದಲಾದ ವಿಶ್ವಾಸಿಕ ವ್ಯಕ್ತಿಗಳೊಡನೆ ಎಲ್ಲಾ ವಿಷಯಗಳ ಬಗ್ಗೆ ಮನಬಿಚ್ಚಿ ಮಾತಾಡಬೇಕು. ಸಮಸ್ಯೆಗಳಿಂದ ತಾತ್ಕಾಲಿಕವಾಗಿಯಾದರೂ ದೂರವಿರಬೇಕು. ನಡೆಯುವುದರಿಂದಾಗಲಿ ಹರಟುವುದರಿಂದಾಗಲಿ ನೆಮ್ಮದಿ ಸಿಗಬಹುದು. ಹಲವಾರು ಕೆಲಸಗಳನ್ನು ಮಾಡುವ ಜವಾಬ್ದಾರಿ ಇದ್ದರೂ ಒಮ್ಮೆ ಒಂದನ್ನೇ ಮಾಡಬೇಕು. ಚರ್ಚೆಗಳಲ್ಲೂ ವಾದಗಳಲ್ಲೂ ಹೆಚ್ಚು ಸಮಯವನ್ನು ಕಳೆಯಬೇಕು. ಇತರರಿಗೆ ಸಹಾಯ ಮಾಡಲು ಪ್ರಯತ್ನಿಸಬೇಕು. ಸ್ವಂತ ಸಮಸ್ಯೆಗಳನ್ನೇ ತುಂಬಾ ಹೊತ್ತು ಚಿಂತಿಸುವುದರಿಂದ ಯಾವ ಪರಿಹಾರವೂ ಸಿಗಲು ಸಾಧ್ಯವಿಲ್ಲ. ಎಲ್ಲರ ಬಗ್ಗೆಯೂ ಎಲ್ಲದರ ಬಗ್ಗೆಯೂ ಮಿತವಾದ ವಿಮರ್ಶೆ ನಡೆಸಬೇಕು. ಇತರರ ಕೆಟ್ಟ ಹವ್ಯಾಸಗಳನ್ನು ಅರಿತುಕೊಳ್ಳಲು ಉತ್ಸಾಹ ತೋರಬಾರದು. ಜೀವನದಲ್ಲಿ ಆಹ್ಲಾದ, ತೃಪ್ತಿಯನ್ನು ಬೆಳೆಸಿಕೊಳ್ಳಬೇಕು. ಆರೋಗ್ಯಕರ ಪರಿಸರದಲ್ಲಿ ವಾಸಿಸಬೇಕು. ದೈನಂದಿನ ಜೀವನದ ಲಘುಸಾಧನೆಗಳಲ್ಲೂ ಆನಂದವನ್ನೇ ಕಾಣಬೇಕು. ಸ್ನೇಹಿತರನ್ನು ಸುತ್ತಮುತ್ತಲಿನವರನ್ನು ಸಂತೋಷಪಡಿಸಲು ಕಲಿಯಬೇಕು.

ಇವೆಲ್ಲಕ್ಕಿಂತಲೂ ಹೆಚ್ಚಾಗಿ ಸಹವರ್ತಿಗಳ ಸಮಾಜದ ಕುಟುಂಬದ ಮತ್ತು ಪ್ರೀತಿ ವಿಶ್ವಾಸ ಸಹಕಾರಗಳು ಮಾನಸಿಕ ರೋಗಿಗಳಿಗೆ ತುಂಬಾ ಅವಶ್ಯಕವಾಗಿರುತ್ತವೆ. ✡

---

**ಪ್ರತಿಯೊಂದು ಸತ್ಕ್ರಿಯೆಗೂ ಕೊನೆಯಲ್ಲಿ ಫಲ ದೊರಕಿಯೇ ತೀರುತ್ತದೆಂಬುದು ನನ್ನ ಅಚಲ ವಿಶ್ವಾಸ.**

— ಮಹಾತ್ಮಾ ಗಾಂಧಿ

# ಇದುವೇ ಜೀವ ಇದು ಜೀವನ

ತಾಯಿಯೊಬ್ಬರ ಅನುಭವವನ್ನು ಅವರ ಮಾತಿನಲ್ಲಿಯೇ ಕೇಳಿ:

ನಮ್ಮ ಮಗು-೧೪-೧೫ ವರ್ಷದವನು-ಸದಾ ಓದುವುದರಲ್ಲಿ ಮುಂದು. ದಿನವೆಲ್ಲವೂ ಏನಾದರೊಂದು ಓದುತ್ತಲೇ ಇರಬೇಕು. ಒಮ್ಮೆ ಈತ ಹೊಟ್ಟೆನೋವೆಂದು ಮಲಗಿಬಿಟ್ಟ. ವೈದ್ಯರನ್ನು ಕಂಡಾಯಿತು; ಆಸ್ಪತ್ರೆಯನ್ನು ಅಲೆದಾಯಿತು; ಎಲ್ಲ ಪರೀಕ್ಷೆಗಳೂ ಆದನಂತರ ತಿಳಿದ ವಿಷಯ-ಅಪೆಂಡಿಸೈಟಿಸ್ ಆಗಿದೆ; ಶಸ್ತ್ರಚಿಕಿತ್ಸೆ ಮಾಡಬೇಕಾಗುತ್ತೆ ಎಂದು. ನನಗಾದರೋ ಗಾಬರಿ. ಇಂತಹ ಎಳೆ ವಯಸ್ಸಿನಲ್ಲಿಯೇ ಅದೆಂತಹ ಶಸ್ತ್ರಚಿಕಿತ್ಸೆ? ಆದರೆ ಅನಿವಾರ್ಯ.

ಒಂದು ದಿನ ಕುಟುಂಬ ವೈದ್ಯರು ಬಂದರು. ಪರೀಕ್ಷಿಸುವ ನೆಪದಲ್ಲಿ ಮಗುವಿಗೆ ಎಲ್ಲವನ್ನೂ ವಿವರಿಸಿದರು, "ನೋಡು ಮಗು, ನಿನ್ನ ಕರುಳಿನಲ್ಲಿ ಸ್ವಲ್ಪಭಾಗ ಕೆಟ್ಟು ಹೋಗಿದೆ. ಅದನ್ನು ತೆಗೆದುಹಾಕಬೇಕಾಗಿದೆ. ಒಂದು ಹಣ್ಣಿನಲ್ಲಿ ಸ್ವಲ್ಪಭಾಗ ಕೆಟ್ಟಾಗ ಅದನ್ನು ತೆಗೆದುಹಾಕದಿದ್ದರೆ ಹಣ್ಣೇ ಕೊಳೆತು ಹೋಗೋದಿಲ್ಲವೇ? ಹಾಗೆಯೇ ಶರೀರದಲ್ಲಿ ಕೂಡ...ಕರುಳಿನ ಸ್ವಲ್ಪ ಭಾಗವನ್ನು ಚಿಕ್ಕ ಆಪರೇಶನ್ನಿನಿಂದ ತೆಗೆದುಹಾಕಿಬಿಡಬಹುದು. ನಾನೂ ಆಪರೇಶನ್ ಸಮಯದಲ್ಲಿ ಬಂದಿರುತ್ತೇನೆ. ಏನೂ ಗಾಬರಿಬೇಡ." ಎಲ್ಲವೂ ಅರ್ಥವಾಯಿತೆಂಬಂತೆ ಮಗು ಹೇಳಿದ್ದನ್ನು ಒಪ್ಪಿಕೊಂಡಿತು. ವೈದ್ಯರು ಈಚೆ ಬರುತ್ತಿದ್ದಂತೆಯೇ ಒಂದು ಪುಸ್ತಕವನ್ನು ಹುಡುಕಿ ತೆಗೆಯಿತು: ಅದು ಶಿವರಾಮ ಕಾರಂತರ 'ವಿಜ್ಞಾನ ಪ್ರಪಂಚ'. ಅದರಲ್ಲಿಯ ಅಪೆಂಡಿಸೈಟಿಸ್ ವಿಷಯವನ್ನು ಅವಸರದಲ್ಲಿ ಹುಡುಕಿ ಓದತೊಡಗಿತು. ಇದೆಲ್ಲವನ್ನೂ ನೋಡುತ್ತಿದ್ದ ನನಗೆ ಏನನ್ನಿಸಿರಬೇಡ?

ಅಂತೂ ಶಸ್ತ್ರಚಿಕಿತ್ಸೆ ಯಶಸ್ವಿಯಾಗಿ ಮುಗಿಯಿತು. ಕೆಲಕಾಲನಂತರ ಮಗುವಿಗೆ ಸ್ಮೃತಿ ಬಂತು. ನಮ್ಮ ವೈದ್ಯರು ಮಗುವನ್ನು ಪರೀಕ್ಷಿಸುತ್ತ ಯೋಗಕ್ಷೇಮ ವಿಚಾರಿಸಿದರು: "ಮಗೂ ಹೇಗಿದ್ದೀಯಾ?"

"ನೋಡಿ ಹೀಗಿದ್ದೇನೆ...ಅಲ್ಲ ಡಾಕ್ಟರ್, ನೀವು ಶಿವರಾಮ ಕಾರಂತರನ್ನು ಬಲ್ಲಿರಾ?"

ಅಪ್ರಾಸಂಗಿಕವಾಗಿ ಬಂದ ಪ್ರಶ್ನೆಗೆ ಉಗುಳು ನುಂಗುತ್ತ ಉತ್ತರಿಸಿದರು ವೈದ್ಯರು, "ಹೌದು."

ಮಗು ಹೇಳತೊಡಗಿತು: "ಕಾರಂತರು 'ವಿಜ್ಞಾನ ಪ್ರಪಂಚ'ವೆನ್ನುವ ಪುಸ್ತಕ ಬರೆದಿದ್ದಾರೆ. ಅದರಲ್ಲಿ ಅಪೆಂಡಿಸೈಟಿಸ್ ಆಪರೇಶನ್ ಬಗ್ಗೆ ಎಲ್ಲವನ್ನೂ ವಿವರಿಸಿದ್ದಾರೆ..."

"ಹಾಗಾದರೆ ನಾವು ಮಾಡಿದ ಆಪರೇಶನ್ ಸರಿಯಾಗಿದೆ ತಾನೆ?" ವಿನೋದವಾಗಿ ವೈದ್ಯರ ಪ್ರಶ್ನೆ...

"ಅದೇನೋ ನಂಗೊತ್ತಿಲ್ಲ. ಆದರೆ ಶಿವರಾಮ ಕಾರಂತರು ಪುಸ್ತಕದಲ್ಲಿ ಒಂದು ದೊಡ್ಡ ತಪ್ಪು ಮಾಡಿದ್ದಾರೆ..."

"ಅರೇ! ಅದೇನು?" ಆಶ್ಚರ್ಯದಿಂದ ಪ್ರಶ್ನಿಸಿದರು ವೈದ್ಯರು.

"ಅಪೆಂಡಿಸೈಟಿಸ್ ಬಗ್ಗೆ ಎಲ್ಲವನ್ನೂ ಚೆನ್ನಾಗಿಯೇ ವಿವರಿಸಿದ್ದಾರೆ. ಆದರೆ ಆಪರೇಶನ್ ಆದ ನಂತರ ಈ ಪಾಟಿ ಹೊಟ್ಟೆನೋವು ಇರುತ್ತದೆಂಬುದನ್ನು ಮಾತ್ರ ಬರೆದೇ ಇಲ್ಲ"

—ಜನಾರ್ದನ ದೇವದಕೇರಿ

ಅವರು ನನಗೆ ತುಂಬ ಪರಿಚಯದ ಮನುಷ್ಯ. ತಿಂಗಳಿಗೊಮ್ಮೆಯಾದರೂ ನಮ್ಮ ಮನೆಗೆ ಬಂದೇ ಬರುತ್ತಾರೆ.

ನಾಲ್ಕಾರು ವರ್ಷಗಳ ಹಿಂದಿನ ಸಂಗತಿ. ಒಮ್ಮೆ ನಾನು ಹುಬ್ಬಳ್ಳಿಗೆ ಹೋಗಲಿದ್ದ ಸುದ್ದಿ ಅದು ಹೇಗೋ ಅವರಿಗೆ ಗೊತ್ತಾಯಿತು. ಅಂದು ಬಂದಾಗ ಕೇಳೇಬಿಟ್ಟರು,
"ನೀವು ಹುಬ್ಬಳ್ಳಿಗೆ

ಹೌದೆ? ಹೋದರೆ ನನ್ನದೊಂದು ಕೆಲಸ ಮಾಡಿಕೊಂಡುಬರುತ್ತೀರಾ?" ಎಂದು,

"ಏನಾಗಬೇಕಿತ್ತು?" ನಾನು ಕೇಳಿದೆ.

ಆಗ ಹುಬ್ಬಳ್ಳಿಯಲ್ಲಿರುವ ಒಂದು ಚಹಾ ಪುಡಿ ಅಂಗಡಿಯ ಹೆಸರು ಹೇಳಿ ಅಲ್ಲಿಂದ ತಮ್ಮ ಉಪಯೋಗಕ್ಕಾಗಿ ಒಂದಿಪ್ಪತ್ತು ಕೇಜಿಯಷ್ಟು ಎಸ್. ಆರ್. ಡಿ. ಚಹಾ ಪುಡಿಯ ಪೆಟ್ಟಿಗೆಯನ್ನು ಖರೀದಿಸಿ ತರುವಂತೆ ಹೇಳಿದರು. ನಾನು ಒಪ್ಪಿಕೊಂಡೆ.

ಹುಬ್ಬಳ್ಳಿಯಲ್ಲಿಯ ನನ್ನ ಕೆಲಸಗಳೆಲ್ಲ ಮುಗಿದಾದ ನಂತರ ಸ್ನೇಹಿತನೊಬ್ಬನನ್ನು ಜೊತೆಗಿಟ್ಟುಕೊಂಡು, ಅವರು ಹೇಳಿದ್ದ ಅಂಗಡಿಗೆ ಹೋಗಿ ಒಂದು ಚೆಸ್ಟ್ ಚಹಾ ಪುಡಿಯನ್ನು ಕೊಂಡದ್ದಾಯಿತು. ಊರಿಗೆ ಬಂದವನೇ ಅವರ ಹಳ್ಳಿಗೆ ಹೋಗುತ್ತಿದ್ದ ವ್ಯಾನಿನಲ್ಲಿ ಅದನ್ನು ಅವರ ಮನೆಗೆ ಕಳಿಸಿದ್ದೂ ಆಯಿತು.

ಎರಡು ದಿನಗಳ ನಂತರ ಅವರ ನಮ್ಮ ಮನೆಗೆ ಬರುತ್ತಿದ್ದಂತೆಯೇ ಅವರ ಗಂಟು ಮೋರೆಯನ್ನು ನೋಡಿ ಏನೋ ಅನರ್ಥವಾಗಿರಬೇಕೆಂದು ಊಹಿಸಿದೆ. ಬಂದವರೇ ಅವರು, "ಒಳ್ಳೆ ಕೆಲಸ ಮಾಡಿದ್ದೀರಿ. ಹಾಂ!" ಎಂದರು ಗಡುಸಾಗಿ.

"ಚಹಾಪುಡಿ ಸುರಕ್ಷಿತ ತಲಪಿತೆ? ಹೇಗಿದೆ?" ನಾನು ಲೋಕಾಭಿರಾಮವಾಗಿ ಕೇಳಿದೆ.

"ಏನೋ ನಾಲ್ಕು ನಗರಗಳನ್ನು ಸುತ್ತಾಡಿದವರು, ಅನುಭವಿಕರು, ಒಂದು ಕೆಲಸ ಮಾಡಿಕೊಂಡು ಬರುತ್ತೀರಿ ಅಂತ ಟೀ ಪುಡಿ ತರಿಸಿದರೆ..."

"ಏನಾಯ್ತು?"

"ಏನಾಯ್ತಾ? ನೀವು ತಂದು ಕೊಟ್ಟ ಟೀ ಪುಡಿ ಅಗದಿ 'ಖಾಸಾ ಭದ್ರ' ಕುಡಿಯಲಿಕ್ಕೇ ಸಾಧ್ಯವಿಲ್ಲ ಆ ಚಹಾನ."

"ಹಾಗಿದ್ದರೆ ವಾಪಸ್ ಕಳಿಸಿಬಿಡಿ; ಪರತ ಮಾಡಿಬಿಡುತ್ತೇನೆ," ಎನ್ನಲೇಬೇಕಾಯಿತು ನಾನು.

"ಛೆ! ತರಿಸಿದ ತಪ್ಪಿಗೆ ಹೇಗಾದರೂ ಖರ್ಚು ಮಾಡಲೇಬೇಕಲ್ಲ. ನಮ್ಮ ಅಳಿಯಂದಿರಿಗೆ ಐದು ಕೇಜಿ, ಭಾವನವರಿಗೆ ಐದು ಕೇಜಿ ಕಳಿಸಿದೆ. ಉಳಿದದ್ದನ್ನು ನಾವೇ ಹೇಗಾದರೂ ಮುಗಿಸಲೇಬೇಕಲ್ಲ!" ಎಂದು ನನ್ನ ಮಾತಿನ ದಾರಿಯನ್ನು ಕಾಯದೆ, "ಬರ್ತೇನೆ" ಎಂದು ಚುರುಕಾಗಿ ವಿದಾಯ ಹೇಳಿ ಹೋಗಿಬಿಟ್ಟರು. ಕೋಪ ತಣಿದ ಮೇಲೆ ಮಾಲಿನ ಹಣ ಬರಬಹುದೆಂದು ನಾನು ಸುಮ್ಮನಾದೆ, ಉಪಕಾರ ಮಾಡಿದ ತಪ್ಪಿಗೆ.

ಹತ್ತಿಪ್ಪತ್ತು ದಿನಗಳು ಕಳೆದ ನಂತರ ಒಂದು ದಿನ ನಮ್ಮ ಮನೆಗೆ ಬರುತ್ತಿದ್ದ ಅವರ ಪ್ರಸನ್ನ ಮುಖವನ್ನು ಕಂಡೇ ನನಗೆ ಆಶ್ಚರ್ಯವಾಯಿತು. ನನ್ನನ್ನು ಕಾಣುತಲೇ, "ಛೇ, ಎಂಥಾ ತಪ್ಪಾಗಿಬಿಟ್ಟಿತು ನೋಡಿ," ಎಂದು ಕೈ ಝಾಡಿಸಿಕೊಂಡರು. "ಏನಾಯ್ತು?" ಎಂದು ಕೇಳಿದೆ.

"ಒಮ್ಮೆ ನಮ್ಮ ಮನೆಗೆ ಬಂದು ಚಹಾ ಕುಡಿದು ನೋಡಿ ಎಂದು ಗಂಭೀರವಾಗಿ. "ನೀವು ತಂದುಕೊಟ್ಟ ಚಹಾಪುಡಿ ಚೆನ್ನಾಗಿಲ್ಲ ಅಂತ ನೆಂಟರಿಷ್ಟರಿಗೆಲ್ಲ ಹಂಚಿಬಿಟ್ಟು ಹತ್ತು ಕೇಜಿ ಇಟ್ಟುಕೊಂಡಿದ್ದೆನಲ್ಲ. ಹೊಸ ಟೀ ಪುಡಿಯಾಗಿದ್ದುದರಿಂದಲೋ ಏನೋ ಮೊದಲು ಹಸುಕಂಪು ವಾಸನೆ ಹೊಡೆಯುತ್ತಿತ್ತು. ಮೇಲಿನ ಸ್ವಲ್ಪ ಪುಡಿ ಖರ್ಚಾದ ನಂತರ ಮಾತ್ರ ನಿಮ್ಮ ಪುಡಿಯಿಂದ ಉತ್ಕೃಷ್ಟ ಚಹಾ ಆಗುತ್ತಿದೆ. ನಮ್ಮ ಮನೆಗೆ ಅದರ ರುಚಿ ನೋಡಲಿಕ್ಕಾದರೂ ನೀವು ಬರಲೇಬೇಕು. ಅದಕ್ಕೆ ಯಾವ ಟೀಯೂ ಸಾಟಿಯಲ್ಲ; ಸುಮ್ಮನೆ ಏಕೆ ಅವರಿವರಿಗೆ ಹಂಚಿಬಿಟ್ಟೆ?" ಎಂದು ಸಂತೋಷದಿಂದ ಹಣ ಕೊಟ್ಟು ಮತ್ತೊಮ್ಮೆ ಉತ್ಸಾಹದಿಂದ ಆಮಂತ್ರಣವಿತ್ತರು.

(ಇದು ನನ್ನೊಬ್ಬ ಸ್ನೇಹಿತನ ಅನುಭವ)

—ಜಿ. ಆರ್. ಬಿದ್ರಕಾನ

# ಮನೆಯ ದೀಪ

ಮೂಲ : ಲಕ್ಷ್ಮಿ
ಅನುವಾದ : ಬಿ. ಆರ್. ಶಂಕರ್

(ತಮಿಳಿನ 'ವೈದ್ಯಳ ಕೈಗೆ ಬಂದ ಹೂಗಳು' ದಿಂದ)

ಅದು ಅವಳಿಗೆ ಮೊದಲ ಹೆರಿಗೆ. ಹೈದರಾಬಾದಿನಿಂದ ತಾಯಿಯ ಮನೆಗೆ ಬಂದಿದ್ದಳು. ಕಳೆಯಾದ ಮುಖ, ಬಳ್ಳಿಯಂಥ ದೇಹ, ಸೀಮಂತ ಆಗಿದ್ದರ ಕುರುಹಾಗಿ ಕೈಗಳಲ್ಲಿ ಬಳೆಗಳು ತುಂಬಿದ್ದವು. ಕೈಬಳೆಗಳ ಸದ್ದು ಕೇಳುತ್ತಿರಲು ತಾಯ್ತನದ ಆನಂದದಲ್ಲಿ ಆಕೆ ನನ್ನನ್ನು ಕಾಣಲು ಬಂದಿದ್ದಳು. ಆಗ ಅವಳಿಗೆ ಏಳು ತಿಂಗಳು. ಅದುವರೆಗೆ ಅವಳು ಪರೀಕ್ಷೆ ಮಾಡಿಸಿಕೊಂಡೇ ಇರಲಿಲ್ಲ.

"ಅದು ಸರಿಯಲ್ಲ" ಎಂದು ನಾನು ಕೋಪಿಸಿಕೊಂಡೆ.

"ಅತ್ತೆ–ಮಾವ, ನಾದಿನಿ–ಮೈದುನರು, ವಾರಗಿತ್ತಿ–ಅವರ ಮಕ್ಕಳು ಅಂತ ದೊಡ್ಡ ಸಂಸಾರ; ಬೆಳಗಿನಿಂದ ಸಂಜೆಯವರೆಗೆ ಮನೆಗೆಲಸವೇ ತುಂಬಿರುತ್ತೆ," ಎಂದಳು.

"ಅದಕ್ಕೇ ಡಾಕ್ಟರೆ, ನಾನು ಹೋಗಿ ಜತೆಯಲ್ಲೇ ಕರಕೊಂಡು ಬಂದೆ," ಎಂದಳು ತಾಯಿ, ಮಗಳನ್ನು ವಹಿಸಿಕೊಳ್ಳುತ್ತ.

ಮದುವೆಯಾದ ಎರಡು ತಿಂಗಳಿಗೆಲ್ಲ ವೈದ್ಯ ಪರೀಕ್ಷೆ ಮಾಡಿಸಿಕೊಳ್ಳಬೇಕು ಅನ್ನುವ ಪಕ್ಷದವಳು ನಾನು. ಕಲಿತವಳು ಹೀಗೆ ತಿಳಿಯದವಳಂತಿದ್ದಾಳಲ್ಲ ಎಂಬ ಸಿಟ್ಟು ನನಗೆ.

ಅವಳನ್ನು ಪರೀಕ್ಷಿಸಿದೆ. ತೆಗೆದುಕೊಳ್ಳಬೇಕಾದ ಔಷಧಿಗಳನ್ನು ಬರೆದುಕೊಟ್ಟೆ. ಆಕೆ ಆರೋಗ್ಯವಂತಳಾಗಿದ್ದಳು.

ಅದಾದ ಮೇಲೆ ಅವಳು ಕ್ರಮವಾಗಿ ಬಂದು ಪರೀಕ್ಷೆ ಮಾಡಿಸಿಕೊಂಡಳು.

"ಹೆರಿಗೆ ಮನೆಯಲ್ಲೆ ಆಗಲಿ. ನೀವು ಮತ್ತು ನರ್ಸ್ ನೋಡಿಕೊಳ್ಳಬೇಕು. ಫೀಜಿನ ಬಗ್ಗೆ ಯೋಚಿಸುವುದು ಬೇಡ." ಎಂದು ಅವಳು ನುಡಿದು ನಗೆ ಬೀರಿದಳು.

ಅವಳ ತಾಯಿಯ ಮನೆಯವರು ಅಂಥ ಶ್ರೀಮಂತರೇನಲ್ಲ. ಒಂದು ಸಂದಿಯಲ್ಲಿ ಅವರ ಮನೆ ಇತ್ತು. ಸೌಕರ್ಯವಿಲ್ಲದ ಮನೆ. ಜತೆಗೆ ತಮ್ಮ ತಂಗಿ ಎಂದು ಮನೆ ತುಂಬ ಜನ. ತಂದೆ ಒಂದು ಸಣ್ಣ ಕೆಲಸದಲ್ಲಿದ್ದರು. ಕೊರತೆ ಬಜೆಟ್ಟಿನಲ್ಲಿ ನಿರ್ವಹಿಸಬೇಕಾದ ಸಂಸಾರದ ಖರ್ಚುವೆಚ್ಚ. ಮದುವೆಗೆ ಮಾಡಿದ್ದ ಸಾಲ ತೀರುವ ಮೊದಲೇ ಚೊಚ್ಚಲು ಹೆರಿಗೆಗೆ ಮಗಳು ಬಂದಿದ್ದಳು. ನಾನು

ಇದೆಲ್ಲವನ್ನೂ ಬಲ್ಲವಳಾದ್ದರಿಂದ, ಫೀಜನ್ನು ಕೊಡುವುದಿಲ್ಲ ಎಂಬ ಅನುಮಾನ ದಿಂದ ನಾನೆಲ್ಲಿ ಬರಲಾಗುವುದಿಲ್ಲ ಅಂದುಬಿಡುತ್ತೇನೋ ಎಂಬ ಅಂಜಿಕೆ ಆಕೆಗೆ.

"ನನ್ನ ನೀವೇ ನೋಡಿಕೊಳ್ಳಬೇಕು ಅಂತ ನನಗೆ ಆಸೆ.", ಅವಳು ಹಟ ಮಾಡಿದಳು.

ಆರೋಗ್ಯವಂತಳಾದ ಗರ್ಭಿಣಿ, ಸುಖಪ್ರಸವ ವಾಗುತ್ತದೆ ಎಂಬ ನಂಬಿಕೆಯಲ್ಲಿ ನಾನು ಒಪ್ಪಿಕೊಂಡೆ.

ನನ್ನ ಎಣಿಕೆ ತಪ್ಪು ಎನ್ನುವಂತೆ ಸುಲಭವಾಗಿ ಕಾಣುತ್ತಿದ್ದ ಕೇಸು ಹೆರಿಗೆಯ ನೋವು ಪ್ರಾರಂಭ ವಾಗುತ್ತಲೂ ಎಲ್ಲಿ ಪ್ರಮಾದವಾಗಿ ಬಿಡುವುದೋ ಎಂಬ ಅಂಜಿಕೆಯುಂಟುಮಾಡಿತು ನನಗೆ ಮತ್ತು ನರ್ಸ್‌ಗೆ.

ಇಡೀ ದಿನವೆಲ್ಲ ನರ್ಸ್ ಅವಳ ಬಳಿಯೇ ಇರುವಂತಾಯಿತು, ಹೇಳಿಕಳುಹಿಸಿದಾಗೆಲ್ಲ ಓಡಿ ಹೋಗಿ ನೋಡಬೇಕಾದ ಪ್ರಸಂಗ ಬಂತು. ಕೊನೆಗೆ ಶಸ್ತ್ರಚಿಕಿತ್ಸೆ ನಡೆಸಿ ಹೆರಿಗೆಮಾಡಿಸ ಬೇಕಾಗಿ ಬಂತು.

ಸಾಧಾರಣವಾಗಿ ಇಂಥ ಕೇಸುಗಳನ್ನು ಗಮನಿಸಲು ಡಾಕ್ಟರು ವ್ಯವಸ್ಥಿತವಾದ ಆಸ್ಪತ್ರೆಯನ್ನೇ ಇಷ್ಟಪಡುತ್ತಾರೆ. ಆದರೆ ಆಸ್ಪತ್ರೆಗೆ ಹೋಗಲಾರದಷ್ಟು ಪರಿಸ್ಥಿತಿ ಇದ್ದರೆ ಇನ್ನೊಬ್ಬ ವೈದ್ಯರ ನೆರವು ಪಡೆಯುವುದೂ ಉಂಟು.

ನಾನು ಕರೆದಾಗೆಲ್ಲ ಬಂದು ಸಹಕರಿಸುವ ನನ್ನ ಗೆಳತಿ ಇದ್ದಾಳೆ. ಮಧ್ಯರಾತ್ರಿಯ ವೇಳೆಯಲ್ಲಿ ನಾನು ಕಳುಹಿಸಿದ ಚೀಟಿಯಂತೆ ಅಗತ್ಯವಾದ ಉಪಕರಣಗಳೊಡನೆ ಅವಳು ಬಂದಳು.

ನನ್ನ ವೈದ್ಯ ಗೆಳತಿ ಅವಳಿಗೆ ಸ್ಮರಣೆ ತಪ್ಪುವ ಔಷಧಿಯನ್ನು ಕೊಟ್ಟಳು. ನರ್ಸ್ ನೆರವಿನೊಡನೆ ಶಸ್ತ್ರ ಚಿಕಿತ್ಸೆ ನಡೆಸಿ ಎಂಟು ಪೌಂಡ್ ತೂಕವಿದ್ದ ಆರೋಗ್ಯವಂತ ಮಗುವನ್ನು ಮಮತೆಯಿಂದ ಎತ್ತಿಕೊಂಡೆ.

"ಹೆಣ್ಣೇ" ಎಂದು ಆ ಮನೆಯಲ್ಲಿ ಯಾರೂ ಉದ್ಗಾರ ತೆಗೆಯಲಿಲ್ಲ. ಹೆಣ್ಣು ಮಗುವಿಗೆ ದೊರೆತ ಸ್ವಾಗತವನ್ನು ಕಂಡು ನಾನು ಗೆಳತಿ ನಮ್ಮ ಶ್ರಮವನ್ನು ಮರೆತು ಆನಂದಪಟ್ಟೆವು.

ಸಾಮಾನ್ಯವಾಗಿ ವೈದ್ಯರಿಗೆ ಸಲ್ಲಬೇಕಾದ ಫೀಜನ್ನು ತಾಂಬೂಲದೊಡನೆ ಕೆಲವು ದಿನಗಳಲ್ಲೇ ಸಲ್ಲಿಸುವುದು ವಾಡಿಕೆ. ನೋವಿನ ವೇಳೆಯಲ್ಲಿ ತಮಗೆ ನೆರವಾದವರಿಗೆ ಈ ರೀತಿಯಲ್ಲಿ ಗೌರವ ಸೂಚಿಸುವುದು ಕಾಲಾನುಕ್ರಮವಾಗಿ ನಡೆದು ಬಂದಿರುವ ರೂಢಿ. ಇನ್ನು ಕೆಲವರು ತಮ್ಮ ಪ್ರೀತಿಯ ಕುರುಹಾಗಿ ಫೀಜಿನೊಡನೆ ಕಾಣಿಕೆಗಳನ್ನೂ ಕೊಡುವುದು ವಾಡಿಕೆ.

ಹಲವು ದಿನಗಳಾದವು. ತಾಯಿ–ಮಗು ಸುಖವಾಗಿದ್ದರು. ಆದರೆ ಫೀಜು ಎಂಬ ಪ್ರಶ್ನೆ ಉದ್ಭವಿಸಲೇ ಇಲ್ಲ. ನಾನೂ ತಾಳ್ಮೆಯಿಂದಿರಲು ಸಿದ್ಧಳಾಗಿಯೇ ಇದ್ದೆ. ಆದರೆ ತಕ್ಕ ಸಮಯದಲ್ಲಿ ನೆರವಿಗೆ ಬಂದ ಗೆಳತಿ ಮತ್ತು ನರ್ಸನ್ನು ಕಾಯಿಸಲು ನನ್ನ ಮನಸ್ಸು ಒಪ್ಪಲಿಲ್ಲ. ಅವರಿಗೆ ಕೊಡಬೇಕಾದ ಹಣವನ್ನು ಕೈಯಿಂದ ಕೊಟ್ಟು ಸುಮ್ಮನಾಗಿಬಿಟ್ಟೆ.

ಒಂದು ತಿಂಗಳಾದ ಮೇಲೆ ಆ ಹೆಣ್ಣು ತನ್ನ ಮಗುವಿನೊಡನೆ ಕಾಣಲು ಬಂದಳು. ಪರೀಕ್ಷೆಯಾದ ಮೇಲೆ ತಾಯಿ ಮಗುವಿಗೆ ಕೆಲವು ಔಷಧಿಗಳನ್ನು ಬರೆದುಕೊಟ್ಟೆ.

"ಮೂರನೆ ತಿಂಗಳ ಪ್ರಾರಂಭಕ್ಕೆ ನಾನು ಊರಿಗೆ ಹೋಗಬೇಕು. ನಮ್ಮ ಯಜಮಾನರು ಪತ್ರ ಬರೆದಿದ್ದಾರೆ, ನಿಮ್ಮ ಫೀಜು..." ಮಾತನ್ನು ಮುಗಿಸದೆ ಅವಳು ತಿಣುಕಿದಳು, "ಈಗ ನಮ್ಮ ತಂದೆ ಕಷ್ಟದ ಪರಿಸ್ಥಿತಿಯಲ್ಲಿದ್ದಾರೆ. ಅವರಿಗೆ ಬರುವ ಸಂಬಳದಲ್ಲಿ ಬಹುಪಾಲು ಹಣ ನನ್ನ ಮದುವೆಯ ಸಾಲಕ್ಕೇ ಹೋಗಿಬಿಡುತ್ತದೆ. ಆದ್ದರಿಂದ ಫೀಜನ್ನು ಕೊಡಲಾಗಿಲ್ಲ. ಈ ಕಾರಣದಿಂದ ನಾನು ನಮ್ಮ ತಾಯಿಗೆ ಹೇಳಿ ಒಂದು ಏರ್ಪಾಡು ಮಾಡಿದ್ದೀನಿ......"

ನಾನು ಮಾತಾಡದೆ ಅವಳನ್ನೇ ನೋಡಿದೆ.

"ಮದುವೆಯಲ್ಲಿ ನನಗೆ ಕೊಟ್ಟ ಸ್ತ್ರೀಧನವನ್ನು ನಾನು ತೆಗೆದುಕೊಂಡು ಹೋಗಿಲ್ಲ. ನಾವು ಬೇರೆ ಸಂಸಾರ ಹೂಡಿದ ಮೇಲೆ ತೆಗೆದುಕೊಂಡು ಹೋದರಾಯಿತು' ಅಂತ ಯಜಮಾನರು ಹೇಳಿದ್ದರು. ಆದ್ದರಿಂದ ತಾಯಿಯ ಮನೆಯಲ್ಲಿ

ಅವೆಲ್ಲ ಸುರಕ್ಷಿತವಾಗಿವೆ. ಅವುಗಳಲ್ಲಿ ಬೆಳ್ಳಿಯ ದೀಪ ತಟ್ಟೆ ತೂಕವಾಗಿವೆ. ಅವುಗಳನ್ನು ಮಾರಿ ನಿಮಗೆ ಕೊಡಬೇಕಾದ ಹಣವನ್ನು ನಮ್ಮ ತಾಯಿ ನಿಮಗೆ ತಂದುಕೊಡ್ತಾರೆ."

ಹೊಟ್ಟೆಯಲ್ಲಿ ಬೆಂಕಿ ಬಿದ್ದಂತೆ ನಾನು ಹಾಹಾರಿ ಬಿಟ್ಟೆ. ಈ ಹಿಂದೆ ನನ್ನ ಫೀಜಿಗಾಗಿ ತನ್ನ ತಾಳಿಯನ್ನೇ ಮಾರಲು ಹೊರಟಿದ್ದ ಒಬ್ಬ ಹೆಣ್ಣಿನ ನೆನಪು ಬಂತು. ನನ್ನ ಮನಸ್ಸು ಬಹಳ ಕಷ್ಟ ಪಟ್ಟಿತು. ಆ ಹೆಣ್ಣು ಮಗಳಿಗೆ ಅಂದ ಮಾತನ್ನೇ ಇವಳಿಗೂ ಹೇಳಿದೆ.

"ನಿಮ್ಮ ತವರು ಮನೆಯಲ್ಲಿ ಕೊಟ್ಟ ಸ್ತ್ರೀಧನವನ್ನು ಮಾರಿ ನನಗೆ ಹಣವನ್ನು ಕೊಡಬೇಕಾಗಿಲ್ಲ, ಕೊಡಬೇಕು ಅನ್ನುವ ಪ್ರಜ್ಞೆ ಇದೆಯಲ್ಲ ಅಷ್ಟೇ ಸಾಕು. ನಿಮ್ಮ ಮನೆಯ ದೇವರ ಮುಂದೆ ಆ ದೀಪ ಸದಾ ಕಾಲ ಉರಿಯಲಿ. ದಯವಿಟ್ಟು ಅದನ್ನು ಆರಿಸಿಬಿಡಬೇಡ."

ಆ ಹುಡುಗಿ ಕಂಬನಿ ಮಿಡಿದು ನನ್ನ ಕಾಲು ಹಿಡಿದಳು.

ದಿನಗಳೆದಂತೆ ನಾನು ವಿಷಯವನ್ನು ಮರೆತು ಬಿಟ್ಟೆ......

ಐದು ವರ್ಷಗಳ ಬಳಿಕ ಅವಳು ನನ್ನನ್ನು ಕಾಣಲು ಬಂದಳು. ಚಿಟ್ಟೆಯಂತೆ ಅಲ್ಲಿ ಇಲ್ಲಿ ಸುಳಿದಾಡುವ ಚೂಟಿಯಾದ ಐದು ವರ್ಷದ ಹೆಣ್ಣು ಮಗುವಿನೊಡನೆ ಬಂದಿದ್ದಳು.

"ನನ್ನ ನೆನಪಿದೆಯೆ ಡಾಕ್ಟರ್ ?"

ಮುಂಚಿಗಿಂತ ಸ್ವಲ್ಪ ದಪ್ಪವಾಗಿದ್ದಳು.

"ನೆನಪಿದೆ ಕಣಮ್ಮ; ಕೂತುಕೋ." ಉಪಚಾರ ಮಾಡಿದೆ. "ಮಗುವಿನ ಹೆಸರೇನು?... ಇವಳಾದ ಮೇಲೆ......?"

"ಮಹಾಲಕ್ಷ್ಮಿ ಅಂತ. ಇವಳಾದ ಮೇಲೆ ಒಬ್ಬ ತಮ್ಮ. ಅಲ್ಲೆ ಹುಟ್ಟಿದ. ಅದರ ಮೇಲೆ ಬೇಡ ಅಂತ ನಿರ್ಧಾರ. ಮಗು ಮಲಗಿತ್ತು. ಅದಕ್ಕೇ ಕರೆದುಕೊಂಡು ಬರಲಿಲ್ಲ, ಇವಳನ್ನು ಕರೆದುಕೊಂಡು ಬಂದೆ. ಇವಳು ನಿಮ್ಮ ಮಗಳಲ್ಲವೆ ?"

ನಗುತ್ತ ನುಡಿದು ಕೈಲಿ ಹಿಡಿದಿದ್ದ ಪಾರ್ಸಲಿನ ಜತೆಗೆ ಒಂದು ಲಕೋಟೆಯನ್ನು ನೀಡಿದಳು.

"ಏನಿದೆಲ್ಲ ?" ಎನ್ನುವ ಮೊದಲೇ ಅವಳೇ ಹೇಳಿದಳು.

"ಮಹಾಲಕ್ಷ್ಮಿ ಹುಟ್ಟಿದ ಮೇಲೆ ನಾವು ಹಂತ ಹಂತವಾಗಿ ಅಭಿವೃದ್ಧಿ ಹೊಂದಿದೆವು. ನಿಮ್ಮನ್ನು ಕಾಣಲು ಈಗ ಸಾಧ್ಯವಾಯಿತು. ಈ ಲಕೋಟೆಯಲ್ಲಿ ನಿಮಗೆ ಸಲ್ಲಬೇಕಾದ ಹಣವಿದೆ. ಕಾಲ ಮೀರಿ ಕೊಟ್ಟುದಕ್ಕೆ...... ಪಾರ್ಸಲಿನಲ್ಲಿ ಒಂದು ರೇಶ್ಮೆ ಸೀರೆ ಇದೆ." ಮತ್ತೆ ನಕ್ಕಳು...

"ಈ ಬಣ್ಣ ನಿಮಗೆ ಒಪ್ಪುತ್ತದೆಯೆ?" ಪಾರ್ಸಲನ್ನು ಬಿಚ್ಚಿದಾಗ ಕೇಳಿದಳು.

'ಕೃತಜ್ಞತೆ! ಮರೆಯದ ನಿನ್ನ ಗುಣ ನನಗೆ ಒಪ್ಪುತ್ತೆ!' ಎಂದುಕೊಂಡೆ.

ಫೀಜು ಕೊಡಲು ತಡವಾದಾಗ ಒಂದು ಕಾಗದ ಬರೆದಿದ್ದರೆ, ಅವಳು ಖಂಡಿತ ಹಣವನ್ನು ಕಳುಹಿಸುತ್ತಿದ್ದಳು. ಆ ಹಣದಿಂದ ನನ್ನ ಬ್ಯಾಂಕಿನ ಬ್ಯಾಲೆನ್ಸ್ ಬಹುಶಃ ತುಸು ಏರಿರುತ್ತಿತ್ತು. ಆದರೆ ಅದು ಇಷ್ಟರ ಮಟ್ಟಿಗಿನ ತೃಪ್ತಿ ಕೊಟ್ಟಿರಲು ಸಾಧ್ಯವೆ?

ಚಿಂತಿಸುತ್ತ ಮಹಾಲಕ್ಷ್ಮಿಯನ್ನು ಕರೆದೆ. ಪರಿಚಿತಳಂತೆ ಚಿಟ್ಟೆಯಂತೆ ನಗುತ್ತ ಬಂದು ಅಪ್ಪಿಕೊಂಡಿತು ಮಗು.

ಕುಬ್ಜಾಲಂ ನದಿಯಲ್ಲಿ ಮಿಂದ ಆನಂದ. ಕೋಟಿ ಹಣದಿಂದ ಕನಕಾಭಿಷೇಕ ಮಾಡಿಸಿಕೊಂಡ ಹರ್ಷದ ಪುಳಕ. ✡

---

"ಇದೇನಮ್ಮಾ, ಮಗೂನ ಹುಟ್ಟಿದ್ಹಬ್ಬಕ್ಕೆ 'ಕುಕಂ ಬುಕ್' ಪ್ರೆಸೆಂಟ್ ಮಾಡ್ದೆ?"

"ಮಗೂ ಬೆಳೆದು ಮದ್ವೆಯಾಗೋ ಹೊತ್ಗೆ ಈ ಬುಕ್ ಫಿಲ್ ಆಗಿರತ್ತೆ, ಅಡ್ಗೆ ಮಾಡೋದು ಅಷ್ಟೇನು ತೊಂದ್ರೆ ಆಗಲ್ಲ ಅಂತ."

ಅಂದಿನ ಘಟನೆ ಇಂದಿನ
ಸಂದರ್ಭದಲ್ಲಿ ಅರ್ಥವತ್ತಾದೀತೆ?

# ವಿಜಯಲಕ್ಷ್ಮಿ ತೋರಿದ ದಾರಿ

**ಗೌರೀಶ ಕಾಯ್ಕಿಣಿ**

ಸೋತ ಸೇನಾಪತಿಗಳು, ಅಪಯಶಸ್ವಿ ಜನನಾಯಕರು ಆತ್ಮಚರಿತ್ರೆ ಬರೆಯುತ್ತಾರೆ,' ಎಂದು ಒಂದು ಜಾಣ್ನುಡಿ ಇದೆ ಇಂಗ್ಲಿಷಿನಲ್ಲಿ. ಅಂದರೆ ತಮ್ಮ ಜೀವನದ ಲೋಪದೋಷಗಳ ಸಮರ್ಥನೆ ಮಾಡಿಕೊಳ್ಳುವ ಅಗತ್ಯ ಇಂಥ ಅಹಂಮನ್ಯ ಧುರೀಣರಿಗೆ ಅನಿಸುತ್ತದೆ. ಇಂಥವರ ಆತ್ಮಚರಿತ್ರೆ ಒಂದು ರೀತಿ ಆತ್ಮಸಮರ್ಥನೆ–ವ್ಯಾಖ್ಯಾದಿಂದ ಒಡಗೂಡಿದ ಆಖ್ಯಾನವೇ ಆಗಿರುತ್ತದೆ. ಆದರೆ ಯಾರು ಜೀವನದಲ್ಲಿ ಸಾರ್ವಜನಿಕವಾಗಿ ಯಶಸ್ವಿಯಾಗಿರುವರೋ ಅಂಥ ಹೆನ್ರಿ ಫೋರ್ಡ್ ಐಸನ್‌ಹಾವರ್ ಮಹಾತ್ಮಾ ಗಾಂಧೀ ವಿನ್‌ಸ್ಟನ್ ಚರ್ಚಿಲ್ ಜವಾಹರಲಾಲ ನೆಹರೂ ಮುಂತಾದ ಮಾನನೀಯರೂ ಆತ್ಮಕಥೆಯನ್ನೂ ತಮ್ಮ ಬದುಕಿನ ನೆನಪುಗಳನ್ನೂ ಬರೆದು ಪ್ರಕಟಿಸಿದ್ದುಂಟು. ಅಂಥವು ಅಂಥವರ ಮಹತ್ವ ಮಾಹಾತ್ಮ್ಯಗಳ ಮರ್ಮವನ್ನು ತೆರೆದುತೋರಿಸುತ್ತವೆ. ಇತಿಹಾಸದ 'ಮಹಾವೀರ ಚರಿತೆ' ನಾಟಕದ ರಂಗದ ಹಿಂದೆ ತೆರೆಯಮರೆಯಲ್ಲಿ ಬಣ್ಣದ ಚೌಕಿನಲ್ಲಿ ಸೂತ್ರ ಸೂತ್ರಗಳ ಚಲನವಲನಗಳ ಮೇಲೆ ಬೆಳಕು ಬೀರುತ್ತವೆ.

ಅಂಥ ಒಂದು ಚಿಕ್ಕ ಆತ್ಮಚರಿತ್ರೆ ಶ್ರೀಮತಿ ವಿಜಯಲಕ್ಷ್ಮಿ ಪಂಡಿತರ 'ದಿ ಸ್ಕೋಪ್ ಆಫ್ ಹ್ಯಾಪಿನೆಸ್' ಅದರಲ್ಲಿ ನೆಹರೂ ಮನೆತನದ ಗೌರವ. ಗಾಥೆಯು ನಮ್ಮ ಸ್ವಾತಂತ್ರ್ಯ ಚಳವಳಿ ಹಾಗೂ ಕಾಂಗ್ರೆಸ್ ಇತಿಹಾಸವೂ ಹಾಸುಹೊಕ್ಕಾಗಿ ಹೆಣೆದುಕೊಂಡ ಭವ್ಯ ಚಿತ್ರಪಟದ ಇಣುಕುಮಿಣುಕುಗಳೂ ಕಣ್ಣನ್ನು ಕೋರೈಸುವಂತೆ ಚಿತ್ರಣಗೊಂಡಿವೆ. ಆದರೆ ಆ ಕುರಿತು ನಾನು ಇಲ್ಲಿ ಹೇಳಲು ಹೊರಟಿಲ್ಲ. ಅಲ್ಲಿ ಬಂದ ಹಲವಾರು ಹೃದ್ಯ ಪ್ರಸಂಗಗಳಲ್ಲಿ ಒಂದನ್ನು ಉದ್ಬೋಧಕವಾಗಿ ಇಲ್ಲಿ ಉದಾಹರಿಸಲಿದ್ದೇನೆ.

ಅಂದು ೧೯೩೭ ರಲ್ಲಿ ಪ್ರಾಂತಿಕ ಸ್ವಾಯತ್ತತೆಯನ್ನು ದುಡಿಸಿಕೊಳ್ಳಲಿಕ್ಕೆ ಕಾಂಗ್ರೆಸ್ಸು ಪ್ರಾಂತಗಳಲ್ಲಿ ಅಧಿಕಾರ ಸ್ವೀಕರಿಸಿತು. ಆಗ ಯುಕ್ತ ಪ್ರಾಂತ(ಇಂದಿನ ಉತ್ತರ ಪ್ರದೇಶ)ದಲ್ಲಿ ಶ್ರೀ ಗೋವಿಂದ ವಲ್ಲಭ ಪಂತರು ಮುಖ್ಯಮಂತ್ರಿಯಾಗಿ, ಶ್ರೀಮತಿ ವಿಜಯಲಕ್ಷ್ಮಿ ಪಂಡಿತರು ಸ್ಥಾನಿಕ ಸ್ವರಾಜ್ಯ ಮತ್ತು ಸಾರ್ವಜನಿಕ ಆರೋಗ್ಯ ಇಲಾಖೆಗಳ ಮಂತ್ರಿಯಾಗಿ ನೇಮಕಗೊಂಡರು. ಆಗಿನ ಒಂದು ಅನುಭವವಿದು. ಇದು

ಇಂದಿನ ನಮ್ಮ ಮಂತ್ರಿ ಮಹೋದಯರಿಗೆ ಮಾರ್ಗದರ್ಶಕವಾಗುವಂತಿದೆ. ಪ್ರಜೆಗಳ ಪ್ರತಿನಿಧಿಗಳಾಗಿ ಪ್ರಭುತ್ವಕ್ಕೆ ಬಂದವರು ಜನತೆಯ ಬೇಡಿಕೆ ಬೆದರಿಕೆಗಳನ್ನು ಹೇಗೆ ನೇರವಾಗಿ ಇದುರಿಸಬೇಕೆಂಬುದಕ್ಕೆ ಇದೊಂದು ವಸ್ತುಪಾಠ.

ಶ್ರೀಮತಿ ಪಂಡಿತ ಮಂತ್ರಿಯಾಗಿದ್ದಾಗ ಹರಿದ್ವಾರದಲ್ಲಿ ಕುಂಭಮೇಳವೊಂದು ಜರುಗಿತು. ೧೨ ವರ್ಷಕ್ಕೆ ಒಮ್ಮೆ ಬರುವ ಮಕರ ಸಂಕ್ರಮಣದ ಮಹಾಪರ್ವಕಾಲ. ಅಂದು ಲಕ್ಷಾಂತರ ಯಾತ್ರಿಕರು ಭಾರತದ ಎಲ್ಲ ಕಡೆಯಿಂದ ಗಂಗಾಸ್ನಾನಕ್ಕಾಗಿ ಹರಿದ್ವಾರಕ್ಕೆ ಕಿಕ್ಕಿರಿದು ನುಗ್ಗುತ್ತಾರೆ. ಆಗಲೇ ಈ ಪ್ರದೇಶದಲ್ಲಿ ಕಾಲರಾ ಮುಂತಾದ ಪಿಡುಗು ರೋಗಗಳು ಹಬ್ಬುವುದು ವಾಡಿಕೆ. ಅದಕ್ಕೆ ಯೋಗ್ಯ ಪ್ರತಿಬಂಧ–ನಿವಾರಣೆಗಳನ್ನು ಏರ್ಪಡಿಸಲು ಮತ್ತು ಈ ಕಾರ್ಯದಲ್ಲಿ ಸ್ಥಳೀಯ ನಾಗರಿಕರ ಸಹಕಾರವನ್ನು ಕೋರಲು ಮಂತ್ರಿಗಳು ಆರೋಗ್ಯ ಖಾತೆಯ ಅಧಿಕಾರಿಗಳೊಂದಿಗೆ ಹರಿದ್ವಾರಕ್ಕೆ ಹೋದರು.

ಹರಿದ್ವಾರ ಪುಣ್ಯಕ್ಷೇತ್ರ. ಅಲ್ಲಿಯ ವಿಶೇಷವೆಂದರೆ ಅಲ್ಲಿಗೆ ಬರುವ ಯಾತ್ರಿಕರನ್ನು ಭಾವಿಕರನ್ನು ಹರಿದು ಸುಲಿಗೆ ಮಾಡುವ ಪಂಡಾಮಂದಿ, ಸಕಲ ಧಾರ್ಮಿಕ ವಿಧಿಗಳನ್ನು ಮಾಡಿಸುವ ಪುರೋಹಿತರು. ಇವರು ಹಣಹದ್ದುಗಳು. ಬಲು ಧನಾಢ್ಯರು. ಅಲ್ಲಿಯ ಗುಡಿಗಳಲ್ಲಿ ಇವರ ಕೈಯಲ್ಲಿ ಮಂದಿಯನ್ನು ಮೋಕ್ಷಕ್ಕೆ ಮುಟ್ಟಿಸುವ ಮೋಟರ ಏಜಂಟರು ಅಂದರೆ ಸರ್ವೇಸಾಮಾನ್ಯವಾಗಿ ಅಶಿಕ್ಷಿತರು, ದುರಭಿಮಾನಿಗಳು. ಅತ್ಯಂತ ಸಂಕುಚಿತ ಮತಾಂಧಲೋಭಿಗಳು, ಆದರೂ ಮಹಾಧೂರ್ತರು. ಮಂತ್ರಿಗಳ ಜತೆಗೆ ಬಂದ ಇಂಗ್ಲೀಷ್ ಅಧಿಕಾರಿಗಳಿಗೆ ಬಾಲಬಡುಕರು. ಅವರ ಹಿಂದೆ ಕೈಕಟ್ಟಿಕೊಂಡು ದೇಶಾವರಿ ನಗು ಬೀರುತ್ತಾ ಅತಿ ವಿನಯದಿಂದ ನಡೆಯುವ ಬಾಲಬಡಕರು. ಬಿಳಿ ಸಾಹೇಬರಿಗೆ ಹಾರತುರಾಯಿ ಸರಬರಾಜು ಮಾಡುವ ಹೊಗಳು ಭಟ್ಟಂಗಿಗಳು.

ಶ್ರೀಮತಿ ಪಂಡಿತರು ಊರೆಲ್ಲ ಸುತ್ತಾಡಿ ಜನಕ್ಕೆ ಆರೋಗ್ಯ ಸ್ವಚ್ಛತೆ ಹಾಗೂ ಚುಚ್ಚುಮದ್ದಿನ ಬಗೆಗೆ ಎಚ್ಚರಿಕೆ ನೀಡಿ ಸುಸ್ತಾಗಿ ಡಾಕಬಂಗಲೆಗೆ ಬಂದು ತಂಗಿದರು. ಅವರು ವಿಶ್ರಮಿಸುತ್ತಿರುವಾಗಲೇ ಈ ಪಂಡಾಮಂದಿಯ ಒಂದು ತಂಡ ಬಂದಿತು. ಅವರು ಘನ ಸರಕಾರಕ್ಕೆ ಒಂದು ಮನವಿ ಸಲ್ಲಿಸಲಿಕ್ಕೆ ಬಂದಿದ್ದರು. ಹರಿದ್ವಾರದಲ್ಲಿ ಗೋಹತ್ಯೆಯನ್ನು ಪ್ರತಿಬಂಧಿಸಬೇಕೆಂದು ಸರಕಾರವನ್ನು ಬೇಡಿಕೊಳ್ಳಲಾಗಿತ್ತು ಈ ಮನವಿಯಲ್ಲಿ. ಈ ಬೇಡಿಕೆ ಪೂರ್ತಿ ನ್ಯಾಯಸಮ್ಮತವಾಗಿತ್ತು. ಏಕೆಂದರೆ ಹರಿದ್ವಾರ ಕೇವಲ ಹಿಂದುಗಳಿಗೆ ಪವಿತ್ರವಾದ ಕ್ಷೇತ್ರ ಸಾಮಾನ್ಯವಾಗಿ ಅದನ್ನು ಸ್ವೀಕರಿಸಿ ಮುಖ್ಯಮಂತ್ರಿಗಳಿಗೆ ಒಪ್ಪಿಸುವದಾಗಿ ಭರವಸೆ ನೀಡುವದು ಶ್ರೀಮತಿ ವಿಜಯಲಕ್ಷ್ಮೀಯವರ ಕೆಲಸವಾಗಿತ್ತು. ಹಾಗೆ ಅವರ ಮನಸ್ಸು ಇತ್ತು.

ಆದರೆ ಈ ಮನವಿಯನ್ನು ಎತ್ತಿಕೊಂಡು ಓದುತ್ತಾ ಹೋದಂತೆ ಶ್ರೀಮತಿ ಪಂಡಿತರು ಚಕಿತರಾದರು. ಅದರಲ್ಲಿ ಜ್ವಾಲಾಪುರದಲ್ಲಿ ಗೋಹತ್ಯೆ ಪ್ರತಿಬಂಧಿಸಬೇಕೆಂಬ ಬೇಡಿಕೆ ಇತ್ತು! ಈ ಜ್ವಾಲಾಪುರ ಹರಿದ್ವಾರ ನಗರಪಾಲಿಕೆಗೆ ಒಳಪಟ್ಟ ಮೂರು ಭಾಗಗಳಲ್ಲಿ ಒಂದು. ಅಲ್ಲಿ ವಾಸಿಸುತ್ತಿದ್ದವರು ಹೆಚ್ಚಾಗಿ ಮುಸ್ಲಿಂ ಕಟುಕರು ಮತ್ತು ತರಕಾರಿ ಮಾರುವವರು. ಇಡಿಯ ಹರಿದ್ವಾರ ನಗರಕ್ಕೆ ಪ್ರತಿಬಂಧಕ ಆಜ್ಞೆ ಜಾರಿಮಾಡಬೇಕೆಂದು ಬೇಡುವ ಧೈರ್ಯ ಈ ಪಂಡಾಮಂದಿಗೆ ಆಗಲಿಲ್ಲ. ಏಕೆಂದರೆ ನಗರದ ಇನ್ನೊಂದು ಭಾಗದಲ್ಲಿ ಇಂಗ್ಲಿಷ್ ಜನರು ದೇಶದ ಆಳರಸರು ವಾಸಿಸುತ್ತಿದ್ದು ಈ ಆಫೀಸರುಗಳ ಆಹಾರದಲ್ಲಿ ಗೋಮಾಂಸ ಒಂದು ನಿತ್ಯದ ಭಾಗವಾಗಿತ್ತು. ಬಡ ಮುಸ್ಲಿಂ ಕಟುಕರು ಅಸಹಾಯರು. ಪ್ರತಿಬಂಧಕ್ಕೆ ಪ್ರತಿಭಟನೆ ತೋರಲಾರರು. ದೈವೋ ದುರ್ಬಲ ಘಾತಕಃ!

ವಿಜಯಲಕ್ಷ್ಮೀಯವರು ಸಿಟ್ಟಿಗೆದ್ದರು. ನಿಯೋಗ ಬಂದ ಪಂಡಾ ಮಂಡಲಿಯನ್ನು ಕೇಳಿದರು, "ಗೋಹತ್ಯೆ ಪ್ರತಿಬಂಧಕಾಜ್ಞೆಯನ್ನು ಇಡಿಯ ನಗರಕ್ಕೆ ಏಕೆ ಅನ್ವಯಿಸಬಾರದು?" ಅದಕ್ಕವರು ನುಣ್ಣಗೆ ಉತ್ತರಿಸಿದರು, "ಒಂದೊಂದೇ ಭಾಗಕ್ಕೆ ಅದನ್ನು ಜಾರಿ ಮಾಡುವುದು ಹೆಚ್ಚು ಸಂಭವ." ಆಗ ಶ್ರೀಮತಿ ಪಂಡಿತರು ಮುಂದರಿದು ಕೇಳಿ

ದರು, "ವಿದೇಶೀ ಆಳರಸರನ್ನು ನೋಯಿಸಲು ನೀವು ಅಂಜುತ್ತೀರಿ, ಇದು ನಿಜವಲ್ಲವೇ? ಒಂದು ಮುಸ್ಲಿಂ ಗುಂಪಿನ ಉಪಜೀವಿಕೆಯನ್ನು ನಾಶಮಾಡಲು ನಿಮಗೆ ಏನೂ ಅನಿಸುವದಿಲ್ಲ!" ಈ ಮಾತಿಗೆ ಪಂಡಾಮಂದಿಯ ಪಿತ್ತ ನೆತ್ತಿಗೇರಿತು. ಅವರು ಶ್ರೀಮತಿ ಪಂಡಿತರನ್ನು ನೆಹರೂ ಕುಟುಂಬವನ್ನು ಬಯ್ಯಲು ಆರಂಭಿಸಿದರು. ಹಿಂದೂ ಧರ್ಮಕ್ಕೆ ದ್ರೋಹಿಗಳೆಂದು ಜರೆದರು. ಪರಿಸ್ಥಿತಿ ಹದಗೆಡುತ್ತ ಹೋಯಿತು. ಆಗ ಮಂತ್ರಿಗಳ ಕಾರ್ಯದರ್ಶಿ ಆ ಜನಕ್ಕೆ ಹೊರಟುಹೋಗಲು ತಿಳಿಸಿದನು. ಅವರು ಹೊರಟು ಹೋಗುವಾಗ ಹೋಗಿ ಪಟ್ಟಣದ ಜನರನ್ನೆಲ್ಲ ಕರೆದು ತರುವೆವೆಂದು ಬೆದರಿಕೆ ಹಾಕಿ ಒದರುತ್ತ ಹೋದರು.

ಅವರು ಹೋದ ಮೇಲೆ ಪೋಲೀಸ್ ಸುಪ–ರಿಂಟೆಂಡೆಂಟರು ಆ ಬಂಗಲೆಯ ಸುತ್ತಲೂ ಪೋಲೀಸ್ ಪಡೆಯನ್ನು ಕಾವಲಿಗೆ ನಿಲ್ಲಿಸುವದಾಗಿ ಸೂಚನೆ ತಂದರು. ಅದನ್ನು ಒಪ್ಪಿಕೊಳ್ಳಿರೆಂದು ಶ್ರೀಮತಿಯವರ ಪಾರ್ಲಿಮೆಂಟರಿ ಸೆಕ್ರೆಟರಿಗಳು ಒತ್ತಾಯಿಸಿದರು. ಆದರೆ ವಿಜಯಲಕ್ಷ್ಮಿಯವರು ಅದನ್ನು ತಳ್ಳಿಹಾಕಿದರು. "ನನ್ನ ಪತಿ ಅಂಥ ಕಾರ್ಯಾಚರಣೆ ಒಪ್ಪಲಾರರು. ಅಲ್ಲದೆ ನಾನು ಜನರಿಂದ ಚುನಾಯಿತ ಮಂತ್ರಿ. ನನಗೆ ಮತಪಿತ್ತವರು ನನ್ನ ವಿರುದ್ಧ ಮತಪ್ರದರ್ಶನ ಮಾಡುವದಾದರೆ ಅದು ಅವರ ವಿಶೇಷಾಧಿಕಾರ."

ಒಂದು ತಾಸಿನೊಳಗೆ ಘೋಷಣೆಗಳ ಕೂಗು ಸಮೀಪ ಕೇಳಿಸಹತ್ತಿತು. ಭಾರೀ ದೊಡ್ಡ ಜನಸ್ತೋಮ ಬರುತ್ತಿತ್ತು.

ಡಾಕ ಬಂಗಲೆಯ ಎಲ್ಲ ಕಿಡಕಿಗಳನ್ನು ಭದ್ರವಾಗಿ ಮುಚ್ಚಿಕೊಳ್ಳಲು ಶ್ರೀಮತಿಯವರು ಅಪ್ಪಣೆಮಾಡಿದರು. ಜನಜಂಗುಳಿ ಅಷ್ಟರಲ್ಲಿಯೇ ಬಂಗಲೆಗೆ ಮುತ್ತಿಗೆ ಹಾಕಿ ಕೂಗಾಡಲು ಸುರು ಮಾಡಿತ್ತು. ಅವರು ಅಸಹ್ಯ ಅವಾಚ್ಯ ಬಯ್ಗುಳನ್ನು ಕೂಗುತ್ತಿದ್ದರು. ಕದಗಳನ್ನು ಮುರಿದು ಒಳನುಗ್ಗುವದಾಗಿ ಗದರಿಸುತ್ತಿದ್ದರು. ಎಲ್ಲ ಕಿಡಕಿಯ ಕಾಜುಗಳನ್ನು ಅವರು ಒಡೆದು ಚಲ್ಲಿದರು.



ಒಂದು ಅರ್ಧಗಂಟೆ ಹೀಗೆಯೇ ನಡೆಯಿತು. ಆಗ ಶ್ರೀಮತಿ ಪಂಡಿತರು ಒಮ್ಮೆಲೆ ಆ ಕೆರಳಿದ ಜನಸ್ತೋಮವನ್ನು ನೇರ ಇದಿರಾಗಬೇಕೆಂದು ನಿರ್ಧಾರ ಮಾಡಿದರು. ಜತೆಗಿದ್ದ ಅಧಿಕಾರಿಗಳ ಬಿನ್ನಹಗಳನ್ನು ಲೆಕ್ಕಿಸದೆ ಅವರು ಬಾಗಿಲು ತೆರೆದು ಹೊರಗೆ ಬಂದರು. ಈ ಆಕಸ್ಮಿಕ ಘಟನೆಯಿಂದ ಹೊರಗಿದ್ದ ಜನಜಂಗುಳಿ ತಬ್ಬಿಬ್ಬಾಯಿತು. ಒಂದು ಕ್ಷಣ ಆ ಜನ ಸ್ತಬ್ಧರಾದರು. ವಿಜಯಲಕ್ಷ್ಮಿ ಒಂದು ಕುರ್ಚಿಯನ್ನು ಎಳೆದುಕೊಂಡು ಅದನ್ನೇರಿ ನಿಂತರು. ಆ ಕೆರಳಿದ ಕೋಲಾಹಲವನ್ನು ಎದುರಿಸಿ ತನ್ನ ಮಣಿಕಟ್ಟಿನಿಂದ ಕೈಗಡಿಯಾರವನ್ನು ಕಳಚಿ ಅವರ ಮುಂದೆ ಹಿಡಿದು ಅಂದರು, "ನೀವು ಸಭ್ಯರಂತೆ ನಡೆದುಕೊಳ್ಳುವಿರಾದರೆ ನಾನು ನಿಮ್ಮ ಜತೆ ಮಾತಾಡುತ್ತೇನೆ. ಶಾಂತರಾಗಲು ನಿಮಗೆ ೧೦ ಮಿನಿಟು ಕೊಡುತ್ತೇನೆ. ನನಗೆ ಅಪಾಯವನ್ನು ಮಾಡುವುದಿದ್ದರೆ ಅದು ನಿಮ್ಮ ಹಕ್ಕು. ಆದರೆ ಅದರಿಂದ ನಿಮಗೇ ಮುಂದೆ ಅಪಾಯ ಹೆಚ್ಚು. ಈ ಗಂಗಾನದಿಯ ತೀರದಲ್ಲಿ ಒಬ್ಬ ಬ್ರಾಹ್ಮಣ ಮಹಿಳೆಯ ಮೇಲೆ ಹಲ್ಲೆ ಮಾಡಿದರೆ ಅದು ನಿಮಗೇನೂ ಭೂಷಣವಲ್ಲ."

ಒಂದೆರಡು ಗಳಿಗೆ ಆ ಹುಚ್ಚೆದ್ದ ಮಂದಿಯ ರೊಚ್ಚು ರುಷಿಸ ಒದರಾಟ ನಿಲ್ಲುವದೊ ಹಾಗೆಯೇ ಮುಂದುವರಿಯುವದೋ ಅನುಮಾನವೇ ಇತ್ತು. ಆದರೆ ಶ್ರೀಮತಿ ಪಂಡಿತ ಕದಲಲಿಲ್ಲ. ಹಾಗೆಯೇ ಕುರ್ಚಿಯ ಮೇಲೆ ಗಡಿಯಾರ ಹಿಡಿದ ಕೈಚಾಚಿ ನಿಂತೇ ಇದ್ದರು. ಜನಸ್ತೋಮದ ಮನೋವೃತ್ತಿ ಒಮ್ಮೆಲೇ ಬದಲಾಯಿತು. ಅವರು ಒಮ್ಮೆಲೆ ಸುಮ್ಮನಾದರು. ಆಗ ಮಂತ್ರಿ ಹೇಳಿದರು. "ನಿಮ್ಮ ಮನವಿ ಮುಖ್ಯಮಂತ್ರಿಗಳಿಗೆ ಮುಟ್ಟಿಸುವೆನು. ಆದರೆ ಅದರಲ್ಲಿ ತಿದ್ದುಪಡಿಮಾಡಿ ಗೋಹತ್ಯೆಯ ಪ್ರತಿಬಂಧಕ್ಕೆ ಸಮಗ್ರ ಹರಿದ್ವಾರ ನಗರವನ್ನು ಒಳಪಡಿಸಬೇಕೆಂಬುದೇ ಈ ತಿದ್ದುಪಡಿ. ಇದಕ್ಕೆ ನೀವು ಅಪೇಕ್ಷಿಸುವದಾದರೆ ನಿಮ್ಮ ಮನವಿಯನ್ನು ನಾನು ಮುಂದುವರಿಸುವುದೇ ಇಲ್ಲ." ಕೆಲ ನಿಮಿಷ ಸುಮ್ಮನೆ ನಿಂತು ಆ ಜನಸಮುದಾಯ ಮೆಲ್ಲನೆ ಚದುರಿತು.

ರಾಜಧಾನಿಗೆ ಮರಳಿದಾಗ ಮುಖ್ಯಮಂತ್ರಿ ಶ್ರೀ ಗೋವಿಂದವಲ್ಲಭ ಪಂತರು ಶ್ರೀಮತಿ ಪಂಡಿತರನ್ನು ಭೆಟ್ಟಿಯಾದರು. ಅವರಿಗೆ ಹಿಂದಿನ ರಾತ್ರಿ ಇಡಿ ನಿದ್ದೆ ಇದ್ದಿಲ್ಲ. ಚಿಂತೆಯಿಂದ ಅವರು ಹರಿದ್ವಾರದಿಂದ ಬಂದ ಪೋಲೀಸ್ ವರದಿಯನ್ನು ಕೇಳಿದ್ದರೂ ಇನ್ನು ಮುಂದೆ ಯೋಗ್ಯ ಸಂರಕ್ಷಣೆಯ ಬಂದೋಬಸ್ತು ಇಟ್ಟುಕೊಂಡೇ ಸಂಚಾರಕ್ಕೆ ಹೋಗಬೇಕೆಂದು ತಾಕೀತು ಮಾಡಿದರು. ತನ್ನ ಸರಕಾರದ ಈ ಒಬ್ಬಳೇ ಹೆಣ್ಣು ಮಂತ್ರಿಯ ಬಗೆಗೆ ಪಂತಜಿಗೆ ಎಲ್ಲಿಲ್ಲದ ಕಾಳಜಿ! ಶ್ರೀಮತಿ ಪಂಡಿತ ತುಸು ಬಿಂಕದಿಂದಲೇ ಉತ್ತರಿಸಿದರು, "ನನ್ನ ರಕ್ಷಣೆಗೆ ನಾನು ಸಮರ್ಥಳು."

ಕೆಲವು ತಿಂಗಳ ನಂತರ ಹರಿದ್ವಾರದ ಪಂಡಾ ಮಂಡಳಿಯ ಮುಖಂಡರಿಂದ ಅಂದು ನಡೆದ ಅಕ್ರಮವರ್ತನೆಗಾಗಿ ಕ್ಷಮೆ ಕೋರಿ ಶ್ರೀಮತಿ ವಿಜಯಲಕ್ಷ್ಮಿಯವರಿಗೆ ಪತ್ರ ಬಂದಿತ್ತು. ಇಂಥ ಧೈರ್ಯ ಸಾಹಸ ಆತ್ಮವಿಶ್ವಾಸ ಮತ್ತು ಜನತೆಯಲ್ಲಿ ನಂಬಿಗೆ ಇಂದು ಎಷ್ಟು ಮಂತ್ರಿಗಳಲ್ಲಿದೆ ? ✿



ತಮ್ಮಲ್ಲಿರುವ ಸ್ವಾತಂತ್ರ್ಯಗಳನ್ನು ಯಾರೂ ಸಾಮಾನ್ಯವಾಗಿ ಬಳಸಲು ಹೋಗವುದೇ ಇಲ್ಲ. ಉದಾಹರಣೆಗೆ 'ಯೋಚನಾ ಸ್ವಾತಂತ್ರ್ಯ.' ಬದಲಾಗಿ ವಾಕ್ ಸ್ವಾತಂತ್ರ್ಯಕ್ಕಾಗಿ ಬಹುಜನ ಒತ್ತಾಯಿಸುತ್ತಾರೆ. —ಕಿಯರ್ಕ್ ಗಾರ್ಡ್

ಪಶುಗಳ ಬಗೆಗೆ ನನಗೆ ಎರಡು ಕಾರಣಗಳಿಗಾಗಿ ಬಹಳ ಹೊಟ್ಟೆಕಿಚ್ಚು; ಮುಂಬರುವ ವಿಪತ್ತಿನ ಜ್ಞಾನ ಅವಕ್ಕಿಲ್ಲ. ತಮ್ಮನ್ನು ಕುರಿತು ಬೇರೆಯವರು ಆಡುವ ಮಾತುಗಳು ಅವುಗಳಿಗೆ ತಿಳಿಯುವುದೇ ಇಲ್ಲ. —ವಾಲ್ಟೇರ್

ಅದು ಮತಿಭ್ರಮಣೆಯು ?

# ಸಾವಿನ ಭಯ

**ಡಾ. ಕೆ. ಎಂ. ಧ್ರುವಕುಮಾರ**

ಕಮಲಳಿಗೆ ಮೂವತ್ತು ವರ್ಷ ವಯಸ್ಸು. ಮನಸ್ಸಿನಲ್ಲಿ ಏನೋ ಒಂದು ರೀತಿಯ ಮುಜುಗರ. ಕೈ ತುಂಬ ಸಂಬಳ ತರುವ ಗಂಡ, ಮುದ್ದಾದ ಒಂದು ಗಂಡು ಮತ್ತು ಒಂದು ಹೆಣ್ಣು ಓಡಾಡಲು ಕಾರು. ದಂಪತಿ ಮತ್ತು ಮಕ್ಕಳ ಅವಶ್ಯಕತೆಗಳನ್ನು ಒದಗಿಸುವುದರಲ್ಲಿ ಗಂಡ ನಿಪುಣ. ದಂಪತಿಯನ್ನು ಕೇಳದೇ ಯಾವುದೇ ಮುಖ್ಯವಾದ ಕೆಲಸವನ್ನು ಸಹ ಮಾಡುವುದಿಲ್ಲ. ಅತ್ತೆ-ಮಾವಂದಿರಿಗಂತೂ ಕಮಲಳನ್ನು ಕಂಡರೆ ಬಲು ಪ್ರೀತಿ. ಆಕಸ್ಮಾತ್ ಗಂಡ ಹೆಂಡಿರಲ್ಲಿ ಯಾವಾಗಲಾದರೂ ಜಗಳವಾದಲ್ಲಿ ಮಗನನ್ನೇ ಗದರಿಸಿಕೊಳ್ಳುವಷ್ಟು ಅತ್ತೆ-ಮಾವಂದಿರಿಗ ಸೊಸೆಯಲ್ಲಿ ವಿಶ್ವಾಸ (ಪತಿಯ ಸಾಕು ತಾಯಿ ತಂದೆಯರನ್ನು ಅತ್ತೆ-ಮಾವಂದಿರೆಂದೇ ಕರೆಯುವಳು). ಒಟ್ಟಿನಲ್ಲಿ ಗಂಡನ ಮನೆಯಲ್ಲಿ ಎಲ್ಲರೂ ಕಮಲಳನ್ನು ವಿಶ್ವಾಸದಿಂದ ನೋಡಿಕೊಳ್ಳುವವರೆ.

ಕಮಲ ಒಂದು ವರ್ಷವಾಗಿರುವಾಗಲೇ ತಂದೆಯನ್ನು ಕಳೆದುಕೊಂಡ ದುರ್ದೈವಿ. ತಾಯಿಯೊಂದರೆ ಕಮಲಳಿಗೆ ಅಚ್ಚುಮೆಚ್ಚು. ಇಂತಹ ಕಮಲಳಿಗೆ ಯಾವುದಾದರೂ ಯೋಚನೆಯಿರಲು ಸಾಧ್ಯವೆ? ಬಂಧುಬಾಂಧವರ ಪ್ರಕಾರ ಕಮಲಳಂತಹ ಸುಖಿ ಯಾರೂ ಇಲ್ಲ. ಅವಳ ಅದೃಷ್ಟವನ್ನು ಎಲ್ಲರೂ ಕೊಂಡಾಡಿದ್ದೇ ಕೊಂಡಾಡಿದ್ದು.

ಆರು ತಿಂಗಳ ಹಿಂದೆ ಕಮಲಳಿಗೆ ವಿಪರೀತ ಹೊಟ್ಟೆ ನೋವು ಕಾಣಿಸಿಕೊಂಡಿತು. ಅದು ಅಪೆಂಡಿಸೈಟಿಸ್ ಎಂದು ಗೊತ್ತಾಗಿ ಅಪೆಂಡಿಕ್ಸ್ ಶಸ್ತ್ರಕ್ರಿಯೆ ಸಹ ಆಯಿತು. ಶಸ್ತ್ರಕ್ರಿಯೆಗೆ ಮೊದಲ ಸಾವಿನ ಭಯ ಪ್ರಾರಂಭವಾಯಿತು. ಶಸ್ತ್ರಕ್ರಿಯೆಯಾಗುವಾಗ ಎಲ್ಲಿ ಸಾವು ಉಂಟಾಗುವುದೋ ಎಂಬ ಭಯ ಕಾಣಿಸಿತು. ಈಗಿನ ಕಾಲದಲ್ಲಿ ಶಸ್ತ್ರಕ್ರಿಯೆಗೆ ಹೆದರುವ ಪ್ರಮೇಯವೇನಿಲ್ಲವೆಂದು ಎಲ್ಲರೂ ಧೈರ್ಯ ಕೊಟ್ಟರು. ಏನೂ ತೊಂದರೆಯಿಲ್ಲದೇ ಶಸ್ತ್ರಕ್ರಿಯೆಯೂ ಮುಗಿಯಿತು. ಕಮಲಳನ್ನು ನರ್ಸಿಂಗ್‌ಹೋಮಿನಿಂದ ಮನೆಗೆ ಕರೆದುಕೊಂಡು ಬಂದಿದ್ದೂ ಆಯಿತು. ಆದರೆ ಕಮಲಳಿಗೆ ತನಗೆಲ್ಲಿ ಸಾವುಂಟಾಗುವುದೋ ಎಂಬ ಭಯ ಸಣ್ಣದಾಗಿ ಕೊರೆಯುತ್ತಲೇ ಇತ್ತು. ಆದರೆ ಈಗ ತನಗೆ ಪ್ರಾಣಹೋಗುವಂತಹ ಕಾಯಿಲೆಯಾವುದೂ ಇಲ್ಲವೆಂದು ತನಗೆ ತಾನೇ ಧೈರ್ಯ ತಂದು

ಕೊಳ್ಳುವಳು. ತನ್ನ ಭಯದಲ್ಲಿ ಹುರುಳಿಲ್ಲವೆಂದು ತಿಳಿದಾಗಲೂ ಭಯ ಹೋಗಲಿಲ್ಲ. ಶಸ್ತ್ರಕ್ರಿಯೆಯಾಗಿ ಐದು ತಿಂಗಳು ಕಳೆಯಿತು. ಇಷ್ಟು ಸಮಯ ಕಳೆದ ಮೇಲೆ ಇನ್ನು ಯಾವ ರೀತಿಯ ಗಂಡಾಂತರವೂ ಇಲ್ಲವೆಂದು ತಿಳಿದಾಗಲೂ ಭಯ ಮಾತ್ರ ದೂರವಾಗಲಿಲ್ಲ. ಭಯ ಕಡಿಮೆಯಾಗುವ ಬದಲು ಹೆಚ್ಚಾಗಬೇಕೆ? ಈಗ ಕಳೆದ ಒಂದು ತಿಂಗಳಿನಿಂದಲೂ ಸಾವಿನ ಭಯ ಸಹಿಸಲಸಾಧ್ಯ.

ಈ ಯಾತನೆ ಸಹಿಸಲಾಗದೆ ಕೊನೆಗೆ ಮನೋರೋಗತಜ್ಞರನ್ನು ಕಾಣಲು ನಿರ್ಧರಿಸಿದಳು. ಇದು ಮಾನಸಿಕ ಅಸ್ವಸ್ಥತೆಯ ಕುರುಹಾಗಿರಬಹುದು. ಎಂಬ ನಿರ್ಧಾರಕ್ಕೆ ತಾನೇ ಬಂದಿರಬೇಕಾದರೆ ಕಮಲಳ ತಿಳುವಳಿಕೆ ಎಷ್ಟಿರಬಹುದೆಂದು ನೀವೇ ಗ್ರಹಿಸಿ. ಮಾನಸಿಕ ಅಸ್ವಸ್ಥತೆಯ ಬಗ್ಗೆ ಇಷ್ಟರ ಮಟ್ಟಿಗೆ ತಿಳುವಳಿಕೆ ಓದಿದವರಿಗೆಲ್ಲಾ ಇರುವುದಿಲ್ಲ. ತನ್ನ ನಿರ್ಧಾರವನ್ನು ತನ್ನ ಪತಿಯ ಮುಂದಿಟ್ಟರೆ ಅವನೂ ಅದನ್ನು ಉತ್ತೇಜಿಸಬೇಕೆ? ಸಾಧಾರಣವಾಗಿ "ನಿನಗೇನೂ ಮಾನಸಿಕ ಅಸ್ವಸ್ಥತೆಯಿಲ್ಲ. ನೀನು ತಜ್ಞರನ್ನು ನೋಡುವ ಆವಶ್ಯಕತೆಯಿಲ್ಲ" ಎಂದೋ "ನೀನೆಲ್ಲಿ ಸಾಯುತ್ತೀಯಾ? ನಿನಗೆಲ್ಲೋ ಭ್ರಾಂತಿ. ನೀನು ಭಯವನ್ನೆಲ್ಲಾ ಬಿಟ್ಟು ಬಿಡು" ಎಂದು ಬುದ್ಧಿವಾದವನ್ನು ಹೇಳಿ ಬಾಯಿ ಮುಚ್ಚಿಸುವವರೇ ಹೆಚ್ಚು. ಗಂಡ ಹೆಂಡಿರಲ್ಲಿ ಹೆಚ್ಚು ಅನ್ಯೋನ್ಯ. ಯಾವುದೂ ಮುಚ್ಚುಮರೆಯಿಲ್ಲ. ಆದುದರಿಂದ ಕಮಲಳ ಯಾತನೆಯ ಸಂಪೂರ್ಣ ಅರಿವು ಗಂಡನಿಗಿದ್ದಿತು. ಬುದ್ಧಿವಾದಗಳಿಂದ ಏನೂ ಪ್ರಯೋಜನವಾಗಿರಲಿಲ್ಲವೆಂಬುದು ಅವನಿಗೂ ತಿಳಿದಿತ್ತು. ಪತಿಯ ಒಪ್ಪಿಗೆ ದೊರೆತ ನಂತರ ಯಾವ ಮನೋರೋಗ ತಜ್ಞರಲ್ಲಿಗೆ ಹೋಗಬೇಕೆಂಬುದು ಸಮಸ್ಯೆಯಾಯಿತು. ತಮಗಂತೂ ಯಾರೂ ತಿಳಿದಿರಲಿಲ್ಲ. ಹಾಗಾದರೆ ಹೇಗೆ ಕಂಡುಹಿಡಿಯುವುದು? ಯಾವ ವೈದ್ಯರನ್ನಾದರೂ ಕೇಳಿದರೆ ಏತಕ್ಕೆಂದು ಅವರು ಕೇಳುವರು. ಯಾರನ್ನೂ ಕೇಳದಿದ್ದರೆ ಯಾರ ಹತ್ತಿರ ಹೋಗಬೇಕೆಂಬುದನ್ನು ತಿಳಿಯುವುದಾದರೂ ಹೇಗೆ? ಕೊನೆಗೆ ಕಮಲಳಿಗ ಒಂದು ಉಪಾಯ ಹೊಳೆಯಿತು. ತಮ್ಮ ಮಕ್ಕಳ ವೈದ್ಯರ ಬಳಿ ಹೋಗಿ, "ಡಾಕ್ಟ್ರೆ, ನಮ್ಮ ಸ್ನೇಹಿತರ ಮಗನೊಬ್ಬನಿಗೆ ಮನೋರೋಗ ತಜ್ಞರನ್ನು ಕಾಣುವ ಅವಶ್ಯಕತೆಯಿದೆ. ಯಾರ ಹತ್ತಿರ ಹೋದರೆ ಪರವಾಯಿಲ್ಲ" ಎಂದು ಜಾಣತನದಿಂದ ನನ್ನ ಹೆಸರು ವಿಳಾಸಗಳನ್ನು ತಿಳಿದು ನನ್ನಲ್ಲಿಗೆ ಬಂದಳು. ನನ್ನನ್ನು ಕಂಡ ಕೂಡಲೆ ತಾನು ಬಂದಿರುವುದನ್ನು ಆ ವೈದ್ಯರಿಗ ಸಹ ತಿಳಿಸಕೂಡದೆಂಬುದೇ ಕಮಲಳ ಕೇಳಿಕೆ.

ಕಮಲ ಇನ್ನೊಬ್ಬ ಹೆಂಗಸಿನ ಜೊತೆ ನನ್ನನ್ನು ಕಾಣಲು ಬಂದಿದ್ದಳು. ಪತಿ ಕೆಲಸಕ್ಕೆ ಹೋಗಿದ್ದ. ಜೊತೆಯಲ್ಲಿದ್ದ ಹೆಂಗಸನ್ನು ಹೊರಗೆ ಕಳುಹಿಸಿದ. ನಂತರ ತನ್ನ ತೊಂದರೆಯನ್ನು ತಿಳಿಸಲು ಹೇಳಿದೆ. ನೀಟಾಗಿ ಬಾಹ್ಯಾಲಂಕಾರಕ್ಕೆ ಗಮನಕೊಟ್ಟ ಕಮಲಳನ್ನು ನೋಡಿದರೆ ಇವಳಿಗೆಲ್ಲಿಯ ಮಾನಸಿಕ ಅಸ್ವಸ್ಥತೆ? ಎಂದು ಯಾರಾದರೂ ಅನುಮಾನ ಪಡುವುದರಲ್ಲಿ ಸಂದೇಹವೇ ಇಲ್ಲ. ಮಾತು ಕತೆಯಲ್ಲಿ ನಯ. ಹೇಳುವ ರೀತಿಯಲ್ಲಿ ಕಮಲ ಬಹಳ ವಿಶ್ವಾಸಾರ್ಹ ವ್ಯಕ್ತಿಯೆಂಬುದರಲ್ಲಿ ಸಂಶಯವಿಲ್ಲ. ತನ್ನನ್ನು ಸಾವಿನ ಭಯವೊಂದು ಯಾಕೆ ಕಾಡುತ್ತಿದೆಯೋ ಗೊತ್ತಿಲ್ಲವೆಂದೂ ಅದೊಂದನ್ನು ಬಿಟ್ಟರೆ ತನ್ನಷ್ಟು ಸುಖಿಯೇ ಇಲ್ಲವೆಂದೂ ಹೇಳಿದಳು. ತನ್ನ ಪತಿ ಬಂಧು ಬಾಂಧವರನ್ನೆಲ್ಲಾ ಹೊಗಳಿದ್ದೂ ಹೊಗಳಿದ್ದೇ. ತನಗ ಯಾವ ರೀತಿಯ ಯೋಚನೆಗಳೂ ಇಲ್ಲವೆಂದಳು. ಒಟ್ಟಿನಲ್ಲಿ ಆ ದಿನ ಅವಳ ಭಯಕ್ಕೆ ಮೂಲ ಕಾರಣವೇನಿರಬಹುದೆಂಬುದನ್ನಂತೂ ತಿಳಿಯಲಾಗಲಿಲ್ಲ. ಈ ರೀತಿ ಪ್ರಬಲವಾದ ಸಾವಿನ ಭಯಕ್ಕೆ ಏನೋ ಕಾರಣವಿರಬೇಕು. ಟಿ. ಎ. ಟಿ. ಎಂಬ ಮಾನಸಿಕ ಪರೀಕ್ಷೆಯಲ್ಲಿ ಕಮಲಳಿಗೆ ಬಹಳ ಕೋಪವಿದೆಯೆಂದು ತಿಳಿಯಿತು. ಒಟ್ಟಿನಲ್ಲಿ ಭಯದ ಮೂಲ ನಿಗೂಢವಾಗಿಯೇ ಉಳಿಯಿತು. ಮನಸ್ಸನ್ನು ಶಾಂತಗೊಳಿಸುವ ಮಾತ್ರೆಗಳನ್ನು ಬರೆದುಕೊಟ್ಟು ಒಂದು ವಾರದ ನಂತರ ನನ್ನನ್ನು ಕಾಣಲು ತಿಳಿಸಿದೆ.

ಎರಡನೆಯ ಭೇಟಿಯಲ್ಲೂ ಕಮಲಳಿಂದ ಭಯದ ಮೂಲದ ಬಗ್ಗೆ ಯಾವ ಉತ್ತರವೂ ದೊರಕಲಿಲ್ಲ. ಇವೆಲ್ಲ ಸಾಧಾರಣ. ಮೂಲ ತಿಳಿ

ಯಲು ಕೆಲವು ಸಮಯ ಹಲವು ಭೇಟಿಗಳೇ ಬೇಕಾಗಬಹುದು. ಸಾವೆಂಬುದು ಯಾರಿಗೂ ಹಿತವಲ್ಲ. ಎಂತಹ ಸಮಸ್ಯೆಗಳಿದ್ದಾಗ್ಯೂ ಮಾನವ ಬದುಕಲು ಪ್ರಯತ್ನಿಸುವನು. ತಾನು ಸಾಯಬಹುದು ಎಂಬುದನ್ನು ಎಷ್ಟು ಜನ ಸಮಾಧಾನವಾಗಿ ತೆಗೆದುಕೊಳ್ಳುವರು? ಕಮಲಳಿಗೆ ಸಹ ಸಾಯುವ ಇಚ್ಛೆಯಿಲ್ಲ. ಹಾಗಾದರೆ ಎಲ್ಲರಂತೆ ಅವಳೂ ಮಾಮೂಲಾಗಲಿಲ್ಲವೇ? ಸಾವು ಎಂದರೆ ಎಲ್ಲರಿಗೂ ಭಯವಾದರೂ ಎಲ್ಲರೂ ಕಮಲಳಷ್ಟು ಭಯಪಡುವರೇ? ಕಮಲಳದು ಅಸಾಧಾರಣ ಭಯ. ಇಷ್ಟೊಂದು ಭಯವಿರಲು ಬೇರೆ ಏನೋ ಕಾರಣವಿರಲೇಬೇಕು. ತಾನು ಸಾಯಬಹುದೆಂಬ ಭಯವೇ ಏಕೆ ಆಗಬೇಕು? ಅನೇಕ ಭಯಗಳಲ್ಲಿ ಈ ಭಯವೊಂದನ್ನೇ ಆರಿಸಲು ಆಂತರಿಕ ಕಾರಣಗಳೇನಾದರೂ ಇರಬಹುದೇ? ಸಾವುಂಟಾಗುವುದೇನೋ ಎಂದುಕೊಳ್ಳುವುದಕ್ಕಿಂತ ಸಾವುಂಟಾಗಲಿ ಎಂದರೆ ಏನಾಗಬಹುದು? ಈ ಪ್ರಶ್ನೆಗಳಿಗೆ ಕಮಲಳಿಂದ ಉತ್ತರಗಳೇನೂ ದೊರಕಲಿಲ್ಲ. ಇಷ್ಟು ಬೇಗ ನಾವು ಉತ್ತರಗಳನ್ನು ನಿರೀಕ್ಷಿಸಲೂ ಕೂಡದು. ಒಟ್ಟಿನಲ್ಲಿ ಈ ಭೇಟಿಯಲ್ಲಿ ಹೆಚ್ಚಿನ ಪ್ರಶ್ನೆಗಳಿಂದ ಸಮಸ್ಯೆ ಇನ್ನೂ ನಿಗೂಢವಾಯಿತು. ಮೂರನೇ ಭೇಟಿಯಲ್ಲಿ ಕಮಲಳ ಭಯ ಹೆಚ್ಚಾಗಿತ್ತು. ನಾನು ಅವಳನ್ನು ಅಪಾರ್ಥ ಮಾಡಿಕೊಂಡಿದ್ದೇನೆಂದು ನನ್ನನ್ನೇ ದೂರಿದಳು. ವಿಷಯವೇನೆಂದು ತಿಳಿಯಲು ಪ್ರಯತ್ನಿಸಿದಾಗ ತನಗೆ ಸಾಯಬೇಕೆಂಬ ಇಚ್ಛೆಯಿದೆಯೆಂಬ ಭಾವನೆಯಿರಬಹುದು ಎಂದು ನಾನು ತಿಳಿದಿರಬೇಕು ಎಂದಳು. ನಾನು ಆ ರೀತಿ ಅವಳಿಗೆ ಹೇಳೇ ಇರಲಿಲ್ಲ. ಹಾಗಾದರೆ ಕಮಲಳೇಕೆ ಈ ರೀತಿ ತಪ್ಪು ತಿಳಿದಳು ಎಂಬ ಪ್ರಶ್ನೆ ನನ್ನಲ್ಲಿ ಮೂಡಿತು. ಮನೋವಿಶ್ಲೇಷಣೆಯಲ್ಲಿ ಪ್ರತಿಯೊಂದೂ ಮುಖ್ಯ. ರೋಗಿಯ ತಪ್ಪು ಗ್ರಹಿಕೆಗೂ ಕಾರಣವಿರುತ್ತದೆ.

"ಕಳ್ಳನ ಮನಸ್ಸು ಹುಳ್ಳಗೆ" ಎಂಬಂತೆ ಆಂತರಿಕವಾಗಿ (ಅಪ್ರಜ್ಞೆಯಲ್ಲಿ) ನಿಜವಾಗಿಯೂ ಸಾಯಬೇಕೆಂಬ ಇಚ್ಛೆಯಿರಲೂಬಹುದು ಎಂದು ಆಗ ನನಗನ್ನಿಸಿತು. ತಾನು ಹುಷಾರಾಗಬೇಕೆಂದಿ

ಯನ್ನು ಬಗೆಹರಿಸಲು ನನಗೆ ಸಹಾಯ ಮಾಡುತ್ತಿದೆಯೆಂದು ಗ್ರಹಿಸಿದೆ. ನನ್ನ ಗ್ರಹಿಕೆ ಎಷ್ಟರ ಮಟ್ಟಿಗೆ ನಿಜ ಎಂಬ ಪ್ರಶ್ನೆ ಬಹುಶಃ ವಾಚಕರಲ್ಲೇಳುವುದು ಸಹಜವೇ. ಈ ಮಟ್ಟದಲ್ಲಿ ನಾನು ಗ್ರಹಿಸಿರುವುದು ಕೇವಲ ಸಾಧ್ಯತೆಯೇ ಹೊರತು ನಿಜವೆಂದು ಹೇಳಲು ಸಾಧ್ಯವಿಲ್ಲ. ಈ ವಿಷಯವನ್ನು ಇನ್ನೂ ಒಂದು ರೀತಿ ಅವಲೋಕಿಸೋಣ. ಈ ಒಂದು ವಿಷಯದ ಎರಡೇ ಎರಡು ಸಾಧ್ಯತೆಯಿರುವುದು. ನಾನು ಕಮಲಳನ್ನು ಅಪಾರ್ಥ ಮಾಡಿಕೊಂಡಿರಬೇಕು. ಮೊದಲ ಸಾಧ್ಯತೆಯನ್ನು ಸಹ ನಾವು ವಿಶಾಲ ಭಾವನೆಯಿಂದ ಪರಿಗಣಿಸಬೇಕು. ನಾನು ಯಾವಾಗ ಮತ್ತೆ ಏನು ಹೇಳಿದುದರಿಂದ ಅವಳಿಗೆ ಈ ರೀತಿ ಅರ್ಥವುಂಟಾಯಿತು ಎಂಬ ಪ್ರಶ್ನೆಯನ್ನು ಮುಂದಿಟ್ಟೆ. ಆಗ ಕಮಲ ಯಾವ ಸಮಂಜಸವಾದ ಉತ್ತರವನ್ನೂ ಕೊಡದಾದಳು. "ಏನೋ ಡಾಕ್ಟ್ರೆ, ನನಗೆ ಆ ರೀತಿ ಅನಿಸಿತು," ಎಂದಳು. ಒಟ್ಟಿನಲ್ಲಿ ತನಗೆ ಸಾಯಬೇಕೆಂಬ ಇಚ್ಛೆಯೇನೂ ಇಲ್ಲವೆಂದು ಸೂಚಿಸಿದಳು. ಬಹುಶಃ ಸಾಯಬೇಕೆಂಬ ಇಚ್ಛೆ ಕಮಲಳಿಗೆ ಬಂದಿರಲೂಬಹುದು ಎಂದು ಆ ಸಮಯದಲ್ಲಿ ನನಗನಿಸಿದರೂ ಆಗ ಹೇಳುವುದು ಸೂಕ್ತವಲ್ಲವೆಂದು ಸುಮ್ಮನಾದೆ.

ನಾಲ್ಕನೆಯ ಭೇಟಿಯಲ್ಲಿ, ಎಷ್ಟು ಭಯವಿದ್ದರೂ ನಗುಮುಖದಿಂದ ಬರುತ್ತಿದ್ದ ಕಮಲ ಬಹಳ ಗಂಭೀರವಾಗಿದ್ದಳು. ಮುಖದಲ್ಲಿ ಕೋಪ ತಾಂಡವವಾಡುತ್ತಿತ್ತು. ಕಾರಣವನ್ನು ತಿಳಿಯಲು ಪ್ರಯತ್ನಿಸಿದೆ. ಕಮಲ ಯಾಕೋ ಕಾರಣ ಹೇಳಲು ಹಿಂಜರಿದಳು. ಹಾಗೂ ಹೀಗೂ ಪ್ರಯತ್ನಿಸಿದ ಮೇಲೆ "ಡಾಕ್ಟ್ರೇ," ಸಂಸಾರ ಅಂದ ಮೇಲೆ ಎಲ್ಲಾ ತೊಂದರೆ ಇದ್ದೇ ಇರುತ್ತದೆ ಅಲ್ಲವಾ?" ಎಂದು ಕೇಳಿದಳು. ನಾನು "ಹೌದು," ಎಂದು ಸಮ್ಮತಿಸಿದೆ. ಆ ದಿನ ಅವಳ ಪತಿ ಅವಳ ಮೇಲೆ ರೇಗಾಡಿದನೆಂದು ಹೇಳಿದಳು. ಈ ವಿಷಯ ಮುಂದಿನ ಎರಡು ಭೇಟಿಗಳಿಗೂ ನಾಂದಿಯಾಯಿತು. ಅವಳ ಪತಿ ಬಹಳ ಕೋಪಿಷ್ಠನೆಂದೂ ಸಣ್ಣ ವಿಷಯಗಳಿಗೆಲ್ಲಾ ಬಲು ಜೋರಾಗಿ

ಅಚ್ಚುಕಟ್ಟಾಗಿರಬೇಕು. ಮಕ್ಕಳಿಲ್ಲಿಯಾದರೂ ಅಕಸ್ಮಾತ್ ಒಂದು ತುಂಡು ಕಾಗದವನ್ನು ನೆಲದ ಮೇಲೆ ಹಾಕಿದ್ದರೆ ಅವರ ಮತ್ತು ಅವಳ ಗತಿ ಮುಗಿಯಿತೆನ್ನುವಷ್ಟು ಸಿಡುಕುವನು. ಮಕ್ಕಳು ಅವನ ವಸ್ತುಗಳನ್ನು ಮುಟ್ಟಕೂಡದು. ಕಮಲಳೇ ಅಕಸ್ಮಾತ್ ಯಾವುದೇ ಒಂದು ವಸ್ತುವನ್ನು ಅದು ಇರಬೇಕಾದ ಸ್ಥಳದಿಂದ ಬಿಟ್ಟು ಬೇರಲ್ಲಿಯೋ ಇಟ್ಟರೆ ಅವಳ ಗ್ರಹಚಾರ ಬಿಡಿಸುವನು. ಈ ಮೂರು ಭೇಟಿಗಳಲ್ಲಿ ಒಂದಾದ ಮೇಲೊಂದು ಇಂತಹ ಅನೇಕ ಉದಾಹರಣೆಗಳನ್ನು ಕೊಟ್ಟಳು. ಈ ಸಿಡುಕು ಬಿಟ್ಟರೆ ಪತಿ ಒಳ್ಳೆಯವನು. ಕಮಲಳೆಂದರೆ ಪ್ರೀತಿ. ಸಿಡುಕಿನ ಸ್ವಭಾವದಿಂದ ಮಕ್ಕಳಿಗೆ ಅವನೊಡನೆ ಮಾತನಾಡಲೂ ಅಂಜಿಕೆ. ಅವನ ಸಿಡುಕಿಗೆ ಜೀವನವೇ ಬೇಸರವಾಗಿದೆಯೆಂದೂ ಹೇಳಿದಳು. ಮಕ್ಕಳು ಅಂಜಿಕೆಯಿಲ್ಲದೇ ತಂದೆಯ ಹತ್ತಿರ ಮಾತನಾಡಲೂ ಸಾಧ್ಯವಿಲ್ಲವೆಂಬುದನ್ನು ನೋಡಿದರೆ ದುಃಖವಾಗುವುದೆಂದಳು. ಪತಿ ಈ ರೀತಿ ಕೋಪಗೊಂಡಾಗ ಮಾತ್ರ ತಾನು ಸತ್ತು ಹೋದರೂ ಪರವಾಯಿಲ್ಲ ಎಂದುಕೊಳ್ಳುತ್ತೇನೆಂದಳು. ಆದರೆ ಮಿಕ್ಕೆಲ್ಲಾ ವಿಷಯಗಳಲ್ಲಿ ಅವನು ಬಹಳ ಒಳ್ಳೆಯವನು. ಎಲ್ಲಾ ಕಡೆಗಳಿಗೂ ಕರೆದುಕೊಂಡು ಹೋಗುವನು ತನಗೆ ಏನು ಬೇಕಾದರೂ ಕೊಡಿಸುವನು. ಈ ನಡುವೆ ಯಂತೂ ಅವನ ಸಿಡುಕು ಅತಿ ಹೆಚ್ಚಾಗಿದೆಯೆಂದಳು. ಸಾವಿನ ಭಯದ ಮೂಲದಲ್ಲಿ ಸಾಯಬೇಕೆಂಬ ಇಚ್ಛೆಯಿರಬಹುದೆಂದೂ ಪತಿಯ ಸಿಡುಕಿನ ಸ್ವಭಾವವೇ ಇದಕ್ಕೆ ಕಾರಣವಿರಬಹುದೆಂಬುದನ್ನು ಕಮಲ ಒಪ್ಪಿಕೊಂಡಳು. ಈ ಮಧ್ಯೆ ಕಮಲಳ ಪತಿಯು ನನ್ನನ್ನು ಭೇಟಿಯಾಗಿದ್ದರು. ತನ್ನ ಪತ್ನಿಯ ತೊಂದರೆ ಏನೆಂದು ತಿಳಿಯದೆಂದೂ, ತಾನು ಮಾತ್ರ ಅವಳಿಗೋಸ್ಕರ ಏನು ಬೇಕಾದರೂ ಮಾಡಲು ಸಿದ್ಧನೆಂದೂ ಹೇಳಿದ್ದರು. ಆರನೆಯ ಭೇಟಿಗೆ

ಕಮಲಳಿಗೆ ಪತಿಯ ಜೊತೆಯಲ್ಲಿ ಬರಲು ಹೇಳಿದೆ. ಅವನ ಮುಂದೆ ಈ ವಿಷಯಗಳನ್ನೆಲ್ಲ ಮಾತನಾಡುವೆನೆಂದು ಕಮಲ ಹೇಳಿದ್ದರೂ ಭೇಟಿಯಲ್ಲಿ ಮಾತ್ರ ಚಕಾರವೆತ್ತಲಿಲ್ಲ. ಪತಿ ಮುಂದಿದ್ದಾಗ ಅವನನ್ನು ಹೊಗಳುವಳು ಮತ್ತು ತಮ್ಮಿಬ್ಬರಲ್ಲಿ ಯಾವ ತೊಂದರೆಯೂ ಇಲ್ಲ ಎನ್ನುವಳು. ಮುಂದಿನ ಭೇಟಿಯಲ್ಲಿ ಮತ್ತೆ ಅವಳೊಬ್ಬಳನ್ನೇ ನೋಡಿದೆ. ಗಂಡನ ಮುಂದೆ ಯಾತಕ್ಕೋಸ್ಕರ ವಿಷಯವನ್ನೇ ಎತ್ತಲಿಲ್ಲ ಎಂಬುದನ್ನು ತಿಳಿಯಲು ಪ್ರಯತ್ನಿಸಿದೆ. ಅವಳ ಪತಿ ನನ್ನ ಮುಂದೆ ಸುಮ್ಮನಿದ್ದು ನಂತರ, "ಇದೆಲ್ಲಾ ಡಾಕ್ಟರಿಗೆ ಏಕೆ ಹೇಳಿದೆ ?" ಎಂದು ತರಾಟೆಗೆ ತೆಗೆದುಕೊಳ್ಳುವಂಥವನೇ ಎಂಬುದನ್ನು ತಿಳಿಯಬೇಕು. ಅಂತಹ ಪತಿಯ ಮುಂದೆ ಇಂತಹ ವಿಷಯಗಳನ್ನೆಲ್ಲಾ ಎತ್ತುವುದು ರೋಗಿಗೆ ಹಾನಿಕರವಾಗುವುದು. ಆದರೆ ಕಮಲಳ ಪತಿ ಅಂಥವನಲ್ಲ ಎಂದು ತಿಳಿಯಿತು. ಯಾವುದನ್ನೂ ಮುಚ್ಚಿಡದೇ ಎಲ್ಲವನ್ನೂ ಹೇಳು ಎಂದು ಅವನೇ ಪ್ರೋತ್ಸಾಹಿಸುವನು. ಆದರೆ ಕಮಲಳಿಗೆ ತನ್ನ ಪತಿ ಹಿರಿಯ; ಹಿರಿಯರ ಮೇಲೆ ಕೋಪ ಮುಂತಾದವುಗಳನ್ನು ತೋರಿಸುವುದು ತಪ್ಪು ಎಂಬ ಭಾವನೆ. ಕೋಪವನ್ನು ವ್ಯಕ್ತಪಡಿಸಿದರೆ ಅವನಿಗೆ ಅವಮರ್ಯಾದೆ ಮಾಡಿದಂತೆ ಮತ್ತು ತನ್ನ ಪತಿಗೆ ತಾನು ಅವಮರ್ಯಾದೆ ಮಾಡುವುದು ಕನಸು ಮನಸಿನಲ್ಲಿಯೂ ತನಗೇ ಒಪ್ಪದ ವಿಷಯ. ನಿಜವಾಗಿಯೂ ತನ್ನ ಪತಿಗೆ ಅವಮರ್ಯಾದೆ ಮಾಡಬೇಕೆಂದಿದ್ದರೆ ಅವಳು ಎಲ್ಲರ ಮುಂದೆಯೂ ಡಂಗುರ ಹೊಡೆದುಕೊಂಡು ಬರುತ್ತಿದ್ದಳು, ಮನೋರೋಗ ತಜ್ಞರ ಮುಂದೆ ಏಕೆ ಹೇಳಬೇಕು ? ಇಲ್ಲಿ ವಿಷಯಗಳು ಹೊರಗೆ ಬಾರದಿದ್ದಲ್ಲಿ ಅವಳ ತೊಂದರೆಯು ನಿವಾರಣೆಯಾಗುವ ಸಾಧ್ಯತೆಯಿಲ್ಲವೆಂದೂ ಅವಳ, ಅವಳ ಮಕ್ಕಳ ಮತ್ತು ಪತಿಯ ಒಳಿತಿನ ದೃಷ್ಟಿಯಿಂದ ವಿಷಯಗಳು ಹೊರಗೆ ಬರುವುದೇ ಒಳ್ಳೆಯದೆಂದೂ ನಾನು ಸ್ಪಷ್ಟಪಡಿಸಿದೆನು.

ಮುಂದಿನ ಭೇಟಿಗಳಲ್ಲಿ ಎಲ್ಲ ವಿಷಯಗಳನ್ನೂ ಬಿಚ್ಚು ಮನಸ್ಸಿನಿಂದ ಇಬ್ಬರೂ ನನ್ನ ಮುಂದೆ ಚರ್ಚಿಸಿದರು. ಕಮಲಳ ಪತಿ ತನ್ನ ತಪ್ಪನ್ನು ಒಪ್ಪಿಕೊಳ್ಳುವುದರಲ್ಲಿ ಹಿಂಜರಿಯಲಿಲ್ಲ. ತಾನು ಜೀವನದಲ್ಲಿ ಬಹಳ ಕಷ್ಟಪಟ್ಟು ಮುಂದೆ ಬಂದಿದ್ದೇನೆಂದೂ ತಂದೆ ತಾಯಿಗಳಿಲ್ಲದ ತನ್ನನ್ನು ಬಹಳ ಶಿಸ್ತಿನಿಂದ ಚಿಕ್ಕಪ್ಪ ಬೆಳೆಸಿದನೆಂದೂ ಹೇಳಿದನು. ಒಂದು ತಪ್ಪು ಮಾಡಿದರೂ ಕಠಿಣ ಶಿಕ್ಷೆ ಅನುಭವಿಸಬೇಕಾಗುತ್ತಿತ್ತು. ಅದಕ್ಕೆ ಸರಿಯಾಗಿಯೇ ಅವನೂ ನಡೆದುಕೊಂಡನು. ಜೀವನದಲ್ಲಿ ತನ್ನ ಏಳಿಗೆಗೆ ಆ ಶಿಸ್ತೇ ಬಹುಶಃ ಕಾರಣವೆಂದು ಅವನ ಅನಿಸಿಕೆ. ತನಗೆ ತಿಳಿಯದಂತೆ ಆ ರೀತಿಯ ಶಿಸ್ತನ್ನು ತನ್ನ ಹೆಂಡತಿ, ಮಕ್ಕಳ ಮೇಲೂ ಹೇರುತ್ತಿದ್ದನು. ಶಿಸ್ತು ಯಾವಾಗಲೂ ಒಳ್ಳೆಯದನ್ನೇ ಮಾಡುವುದಿಲ್ಲ. ಅದು ಅತಿ ಹೆಚ್ಚಾದಾಗ ಕೆಟ್ಟ ಪರಿಣಾಮವನ್ನೂ ಬೀರಬಹುದು ಎಂಬುದನ್ನು ಈಗ ಮನಗಂಡನು. ಪತಿ ಸಿಡುಕಿದರೆ ಕಮಲ ಸುಮ್ಮನಿರುವಳು. ತಾನು ಕೋಪಿಸಿಕೊಂಡರೆ ಪರಿಸ್ಥಿತಿ ಎಲ್ಲಿ ವಿಕೋಪಕ್ಕೆ ಹೋಗುವುದೋ ಎಂಬ ಭಯ ಅವಳಿಗೆ. ಆ ಸಮಯದಲ್ಲಿ ಸುಮ್ಮನಿದ್ದು ಅವನು ಸಮಾಧಾನವಾಗಿದ್ದಾಗ ಅವನಿಗೆ ಕೋಪ ಬಾರದೇ ಇರುವ ರೀತಿಯಲ್ಲಿ ಹೇಳಲು ಪ್ರಯತ್ನಿಸಲಿಲ್ಲವೇಕೆ? ಒಟ್ಟಿನಲ್ಲಿ ಪತಿಯದು ಸಿಡುಕಿನ ಸ್ವಭಾವ. ಕಮಲ ಆ ಸ್ವಭಾವಕ್ಕೆ ತಡೆ ಹಾಕಲು ಪ್ರಯತ್ನಿಸಿರಲಿಲ್ಲ ಮತ್ತು ಅದರಿಂದುಂಟಾದ ಬೇಜಾರನ್ನು ಸಹಿಸಿಕೊಂಡು ಹೋಗಿದ್ದಳು. ಇದರಿಂದ ಅವನ ಸಿಡುಕು ಹೆಚ್ಚಾಗಿತ್ತು. ಇದನ್ನು ಇಬ್ಬರೂ ಬೇಕೆಂದು ಮಾಡಿರಲಿಲ್ಲ. ಅವರಿಗೆ ತಿಳಿಯದೇ ಇದು ನಡೆದಿತ್ತು. ಭಾವನೆಗಳನ್ನು ಅದುಮಿಟ್ಟುಕೊಳ್ಳುವುದರಿಂದ ಹಾನಿಯಾಗುವುದು. ಕಾಲಕ್ರಮೇಣ ಬೇಸರ ಹೆಚ್ಚಿ ಸಾವಿನ ಭಯದಲ್ಲಿ ಅದು ರೂಪುಗೊಂಡಿತು. ಅವಳು ಎದುರುತ್ತರ ಕೊಟ್ಟರೆ ತಾನು ತಪ್ಪು ತಿಳಿದುಕೊಳ್ಳುವಷ್ಟು ಸಂಕುಚಿತ ಭಾವನೆಯುಳ್ಳವನಲ್ಲವೆಂದು ಅವಳ ಪತಿ ಹೇಳಿದನು. ಪತಿ ಇಂಥವನಿದ್ದಾಗಲೂ ಆಕೆ ಏತಕ್ಕೆ ಸುಮ್ಮನಿದ್ದಳೆಂಬುದು ಒಗಟೇ ಅಲ್ಲವೇ ?

ಒಂದೆರಡು ವಾರಗಳು ಕಳೆದವು. ಒಂದು ದಿನದ ಇಬ್ಬರೂ ಉಲ್ಲಸಿತರಾಗಿಯೇ ಕ್ಲಿನಿಕ್ಕಿಗೆ ಬಂದರು.

ಕಮಲಳ ಸಾವಿನ ಭಯ ವಾಸಿಯಾಗಿತ್ತು. ನಾಲ್ಕು ದಿನಗಳ ಹಿಂದೆ ಮಕ್ಕಳು ಆಟದ ಸಾಮಾನನ್ನು ಚೆಲ್ಲಾಪಿಲ್ಲಿಯಾಗಿ ಎಸೆದಿದ್ದರು. ಪತಿಯು ಮಕ್ಕಳ ಮೇಲೆ ಮತ್ತು ಕಮಲಳ ಮೇಲೆ ಕೂಗಾಡಲು ಪ್ರಾರಂಭಿಸಿದನು. ಕಮಲಳಿಗೆ ಕೇಳಿ ಕೇಳಿ ಸಾಕಾಯಿತು. ಕೊನೆಗೆ ಬೇಸತ್ತು, "ನಿಮಗೆ ಬೇಕಾದರೆ ಸಾಮಾನುಗಳನ್ನು ಸರಿಯಾಗಿಡಿ. ಇನ್ನೆಂದೂ ನಿಮ್ಮ ಕೂಗಾಟವನ್ನು ಚೂರೂ ಸಹಿಸಲು ಸಾಧ್ಯವಿಲ್ಲ" ಎಂದು ಅವಳು ಸಹ ಅವನ ಮೇಲೆ ಕಿರುಚಿದಳು. ಅಂದಿನಿಂದ ಅವನು ಕಿರುಚಾಡುವುದನ್ನು ಬಹಳ ಕಡಿಮೆ ಮಾಡಿರುವನೆಂದೂ ಮನೆಯಲ್ಲಿ ಒಂದು ರೀತಿಯ ನೆಮ್ಮದಿ ನೆಲಸಿದೆಯೆಂದೂ ಕಮಲ ನುಡಿದಳು. ಅವಳ ಪತಿಯೂ ನಗುತ್ತಲೇ ಎಲ್ಲವನ್ನೂ ಒಪ್ಪಿಕೊಂಡು, "ಏನ್ಮಾಡಲಿ ಡಾಕ್ಟರ್, ನನಗೂ ಅದು ಇಷ್ಟವಿಲ್ಲ. ಆದರೆ ಹಾಗಾಗಿಬಿಡುತ್ತದೆ," ಎಂದನು. ಮತ್ತೆರಡು ವಾರಗಳು ಕಳೆದರೂ ಕಮಲಳ ಸಾವಿನ ಭಯ ಮರುಕಳಿಸಲಿಲ್ಲ. ಇನ್ನೂ ಒಂದೆರಡು ಭೇಟಿಗಳಿಗೆ ನಾನೇ ಬೇಡವೆಂದರೂ, "ಇಲ್ಲ ಡಾಕ್ಟರ್, ನಮಗೆ ಇದರಿಂದ ಬಹಳ ಅನುಕೂಲವಾಗುತ್ತಾ ಇದೆ. ನಾವಿಬ್ಬರೂ ಇನ್ನೂ ಸ್ವಲ್ಪ ಹೆಚ್ಚಾಗಿ ಪರಸ್ಪರ ಅರಿತುಕೊಂಡರೆ ಒಳ್ಳೆಯದು" ಎಂದು ಅವರೇ ಬಂದರು. ಇಬ್ಬರಿಗೂ ಮನೆಯಲ್ಲಿ ನೆಮ್ಮದಿ ನೆಲಸಿದುದು ಸಂತೋಷವಾಗಿತ್ತು. ಮಕ್ಕಳೂ, "ಅಮ್ಮ, ಅದೇನು ಈ ನಡುವೆ ಅಪ್ಪ ಕೂಗಾಡುವುದೇ ಇಲ್ಲ?" ಎಂದು ಕೇಳಿದರೆ ಇಬ್ಬರೂ ಒಬ್ಬರನ್ನೊಬ್ಬರು ನೋಡಿ ನಗುವರು. ಕೊನೆಯ ಭೇಟಿಯಲ್ಲಿ ಮರದ ಕೆತ್ತನೆಯ ಫಲಕವನ್ನು ನೆನಪಿಗಾಗಿ ಕೊಟ್ಟರು. ನಾನು ಅವರಿಗ ಪೂರ್ತಿ ಚಾರ್ಜ್ ಮಾಡಿದ್ದರಿಂದ ನನಗೆ ಅವರ ಕೊಡುಗೆಯನ್ನು ತೆಗೆದುಕೊಳ್ಳುವುದು ಸಮಂಜಸವೆನಿಸಲಿಲ್ಲ. ಆದರೆ ಅವರಿಬ್ಬರೂ ಬಿಡಬೇಕಲ್ಲ? "ನಿಮ್ಮನ್ನು ಯಾವತ್ತೂ ಮರೆಯಲಾಗುವುದಿಲ್ಲ ಡಾಕ್ಟ್ರೆ, ಇದೇನಿದ್ರೂ ನಮ್ಮ ವಿಶ್ವಾಸದ ಉಡುಗೊರೆ." ಎಂದು ನನ್ನ ಕೈಯಲ್ಲಿಟ್ಟೇ ಬಿಟ್ಟರು.

ಕಮಲಳ ಕಾಯಿಲೆ ಮತಿಭ್ರಮಣೆಯೇ? ಖಂಡಿತ ಅಲ್ಲ. ಅವಳಿಗೆ ಮಾನಸಿಕ ಅಸ್ವಸ್ಥತೆಯಿದೆಯೆಂದರೆ ಯಾರಿಗಾದರೂ ನಂಬಲು ಸಾಧ್ಯವಾದ ರೀತಿಯಲ್ಲಿ ಸಮಾಜದಲ್ಲಿ ಜೀವನ ನಡೆಸುತ್ತಿರುವ ಸುಸಂಸ್ಕೃತಳು. ಅದು ನಿಜವಾಗಿಯೂ ಹುಚ್ಚಾಗಿದ್ದಲ್ಲಿ ಅದನ್ನು ಮುಚ್ಚಿಡುವುದು ಅಷ್ಟು ಸುಲಭವಲ್ಲ. ಇದನ್ನು ಸೈಕೋನ್ಯೂರೋಸಿಸ್ ಎಂದು ಕರೆಯುತ್ತೇವೆ. ಈ ಕಾಯಿಲೆಯಲ್ಲಿ ಪ್ರಜ್ಞೆಗೂ ಅಪಪ್ರಜ್ಞೆಗೂ ಘರ್ಷಣೆಯುಂಟಾಗಿ ಇದರಿಂದ ಮಾನಸಿಕ ದುಗುಡ, ನಡುಕ, ಭಯ, ಮುಂತಾದವುಗಳುಂಟಾಗುತ್ತವೆ. ಮನಸ್ಸಿನಲ್ಲಿ ಅಶಾಂತಿ ಉಂಟಾಗುವುದು. ಕೈಕಾಲುಗಳು ಅದುರಬಹುದು, ಕೆಲವರಿಗೆ ಶಬ್ದಗಳನ್ನು ಸಹಿಸಲಸಾಧ್ಯವಾಗುವುದು. ಮತ್ತೆ ಕೆಲವರಿಗೆ ಶಾರೀರಿಕ ನೋವುಗಳೂ ಕಾಣಿಸಿಕೊಳ್ಳಬಹುದು. ಮಾನಸಿಕ ಅಸ್ವಸ್ಥತೆಗಳಲ್ಲಿ ಸಂಪೂರ್ಣವಾಗಿ ವಾಸಿಮಾಡಲು ಸಾಧ್ಯವಿರುವಂತಹ ಕಾಯಿಲೆಗಳಲ್ಲಿ ಸೈಕೋ–ನ್ಯೂರೋಸಿಸ್ ಸಹ ಒಂದು. ಹಾಗಾದರೆ, ಈ ವೈಜ್ಞಾನಿಕ ಯುಗದಲ್ಲಿಯೂ ಕೇಳಿಬರುವ "ಮನೋರೋಗಕ್ಕೆ ಮದ್ದಿಲ್ಲ" ಎಂಬ ಪುರಾತನ ನಾಣ್ಣುಡಿಗೆ ಅರ್ಥವಿದೆಯೇ? ✡

(ನೈಜ ಘಟನೆ. ವ್ಯಕ್ತಿಯ ಹೆಸರು ಕಾಲ್ಪನಿಕ)

---

ತೀ. ನಂ. ಶ್ರೀ. ಒಂದು ದಿನ ಮನೆಯಲ್ಲಿ ಅತಿಥಿಗಳೊಂದಿಗೆ ಮಾತಾಡುತ್ತ ಕುಳಿತುಕೊಂಡಿದ್ದರು. ಆಗ ಬೆಳಗಿನ ಹೊತ್ತು. ಕಾಫಿಯೊಂದಿಗೆ ಹರಟುತ್ತಿದ್ದಾಗ ಹೊರಗೆ ಭಾರಿ ಗಲಾಟೆ–ಸದ್ದು ಕೇಳಿಬರತೊಡಗಿತು. ಬಂದವರು, "ಏನು ಗಲಾಟೆ?" ಎಂದು ಕೇಳಿದಾಗ ತೀ. ನಂ. ಶ್ರೀ. ನಗುತ್ತ, "ನಳ ಸ್ವಯಂವರ ನಡೆಯುತ್ತಿದೆ. ಒಬ್ಬ ನಳನಿ

# ನಾಲ್ವತ್ತೇಳು ಗಂಟೆಗಳು

ಸತ್ಯಾ ಸವನೂರು

ಸುಮಾರು ಹನ್ನೊಂದು ಗಂಟೆ ಆಗಿರಬಹುದು. ಯಾವಳೋ ಒಬ್ಬ ಅಮೇರಿಕನ್ ವಿದ್ಯಾರ್ಥಿಯ ಮದ್ರಾಸ ಸಂದರ್ಶನ ಕಾರ್ಯಕ್ರಮಗಳನ್ನು ಗೊತ್ತುಪಡಿಸುತ್ತಿದ್ದೆ. ಐ.ಐ.ಟಿ.ಗೆ ಫೋನು ಮಾಡಿಯಾಗಿತ್ತು. ಇನ್ನು ಟಿ. ವಿ. ಸೆಂಟರಿಗೆ ಮಾಡೋಣಾಂತ ಇದ್ದೆ. ಅಷ್ಟರಲ್ಲಿ ಸೆಲ್ವನ್ ಬಂದು "ಏ ಮೇಲೆ ಉಂಗಳುಕ್ಕು ಒರು ಟೆಲಿಫೋನ್ ಕಾಲ್ ಇರುಕ್ಕು," ಅಂತ ಹೇಳಿದ. ನಾನು ಬೇಜಾರಿನಿಂದ ಆ ಟೇಬಲ್ಲಿಗೆ ಹೋದೆ.

"ಗುಡ್ ಮಾರ್ನಿಂಗ್. ಸತ್ಯ ಮಾತಾಡುತ್ತಿರುವುದು."

"... ..."

"ಹಾಂ. ಹೌದು ನಿಮ್ಮೊಂದಿಗೆ ಮಾತಾಡುವುದೇ ಒಂದು ಆನಂದ."

"... ... ... ... ... ... ..."

"ಹೌದೌದು ನಾನು ಎಬಿ ನೆಗೆಟಿವ್. ಆದರೆ ನಿಮಗಿದು ಹೇಗೆ ತಿಳಿಯಿತು?"

"... ... ... ... ... ... ..."

"ಓಹ್! ನನಗದು_ ಮರೆತೇ ಹೋಗಿತ್ತು. ಈಗ ನನ್ನಿಂದೇನಾಗಬೇಕು ಹೇಳಿ."

"... ... ... ... ... ... ..."

"ಅಡ್ಡಿಯಿಲ್ಲ. ಸಂತೋಷದಿಂದ ಬರುತ್ತೇನೆ. ನಾಳೆ ಬೆಳಿಗ್ಗೆ ಎಂಟು ಗಂಟೆಗೆ ಪೆರಂಬೂರ್ ಆಸ್ಪತ್ರೆಗಲ್ಲವೆ? ಆಗಲಿ ನಮಸ್ಕಾರ."

ಇದನ್ನೆಲ್ಲ ಕೇಳುತ್ತಿದ್ದ ನನ್ನ ಕನ್ನಡ ಮಿತ್ರ ಆಫೀಸ್ ಮ್ಯಾನೇಜರ್ ರಘುನಾಥ ಇದು ಯಾರ ಫೋನೆಂದು ಕೇಳಿದ. ಅವನಿಗೆ ಏನಿದ್ದರೂ ಪೂರ್ತಿ ಇತಿಹಾಸ ಬೇಕು. ಎರಡು ವರ್ಷಗಳ ಹಿಂದೆ ನನ್ನ ಬಂಧುವೊಬ್ಬ ಬಂದಾಗ ನಾವಿಬ್ಬರೂ ಸ್ಟ್ಯಾನ್ಲಿ ಮೆಡಿಕಲ್ ಕಾಲೇಜಿನಲ್ಲಿ ನಡೆದ ಪ್ರದರ್ಶನ ನೋಡಲು ಹೋದದ್ದು; ಅಲ್ಲಿ ಕೇವಲ ಎರಡು ರೂಪಾಯಿ ಕೊಟ್ಟು ನಮ್ಮ ನಮ್ಮ ರಕ್ತದ ಗುಂಪು ತಿಳಿದುಕೊಂಡದ್ದು; ದಾನಿಯ ಕಾರ್ಡು ಮಾಡುವಾಗ ಮೂರು ನಾಲ್ಕು ಜನ ಹೌಸ್ ಸರ್ಜನ್ನುಗಳು ಬಂದು ನನ್ನದು ಬಹಳ ಅಪರೂಪದ ಗುಂಪಿನ ರಕ್ತವೆಂದೂ ಅವಶ್ಯ ಬಿದ್ದಾಗ ಹೇಳಿ ಕಳಿಸುವುದಾಗಿಯೂ ಹೇಳಿದ್ದನ್ನು ರಘುನಿಗೆ ಹೇಳಿದೆ. ಅಲ್ಲದೇ

ಯಾವನೋ ಶ್ಯಾಮಸುಂದರ ಎನ್ನುವ ಸಮಾಜ ಸೇವಕ ಮೆಡಿಕಲ್ ಕಾಲೇಜಿನಿಂದ ನನ್ನ ಹೆಸರು ಪಡೆದುಕೊಂಡು ಫೋನ್ ಮಾಡಿದ್ದು; ಯಾರೊ ಸುಮಾರು ಹತ್ತೊಂಬತ್ತು ವರ್ಷ ವಯಸ್ಸಿನ ಹುಡುಗನ ಶಸ್ತ್ರಚಿಕಿತ್ಸೆಗೆ ನನ್ನ ರಕ್ತ ಬೇಕಾಗಿದೆಯೆಂದೂ ಈ ಕಾರ್ಯಕ್ಕಾಗಿ ಮರುದಿನ ಪೆರಂಬೂರ್ ರೇಲ್ವೆ ಆಸ್ಪತ್ರೆಗೆ ಹೋಗಬೇಕೆಂದೂ ಸಂಪೂರ್ಣ ಇತಿಹಾಸ ಹೇಳಿದೆ. ಇದೇ ಸಂದರ್ಭದಲ್ಲಿ ಮರುದಿನ ಮಧ್ಯಾಹ್ನ ಒಂದು ಗಂಟೆಯವರೆಗೆ ಆಫೀಸಿಗೆ ಬರಲಾಗುವದಿಲ್ಲವೆಂದೂ ಹೇಳಿಬಿಟ್ಟೆ. ಅವನು ಒಂದೇ ಮಾತಿಗೆ "ಹೂಂ" ಅಂದದ್ದು ಆ ರೋಗಿಯ ಪುಣ್ಯವೆನ್ನಬೇಕು. ಮ್ಯಾನೇಜರ್ ಇರದೇ ಇದ್ದಾಗ ರಘುನೇ ನಮ್ಮ ಬಾಸ್. ರಕ್ತದಾನ ಮಾಡುವುದರಿಂದ ನನಗೆ ಪುಣ್ಯ ಬರುವುದೋ ಇಲ್ಲವೋ ಆ ದೇವರಿಗೆ ಗೊತ್ತು. ಆದರೆ ಅರ್ಧ ದಿನ ರಜೆ ಕೊಟ್ಟದ್ದಕ್ಕೆ ರಘುಗೆ ಪುಣ್ಯ ಬರುತ್ತದೆನ್ನುವುದು ಮಾತ್ರ ಖಂಡಿತ.

ಅಂದಿನ ಕೆಲಸವನ್ನೆಲ್ಲ ಬೇಗ ಬೇಗನೆ ಮುಗಿಸಿ ನಾಲ್ಕು ಗಂಟೆಗೆ ಹೊರಬಿದ್ದೆ. ಅಲ್ಲದೇ ಆಸ್ಪತ್ರೆಯಿಂದ ಮರಳುವಾಗ ಪೆರಂಬೂರಲ್ಲಿಯ ನಮ್ಮ ಒಬ್ಬ ಗಿರಾಕಿಯನ್ನು ಭೆಟ್ಟಿಯಾಗಿ ಬರುವುದಾಗಿ ಮೊದಲೇ ರಘುಗೆ ಹೇಳಿ ಮರುದಿನ ಆಫೀಸಿಗೆ ಬರದೇಯಿದ್ದರೂ ನಡೆಯುವಷ್ಟು ವ್ಯವಸ್ಥೆ ಮಾಡಿಕೊಂಡೆ.

*

ಇನ್ನು ಮನೆಯಲ್ಲಿ ಇನ್ನೊಂದು ಸಾಹಸದ ಕೆಲಸವಿತ್ತು. ನಾನೇನೋ ಒಳ್ಳೆ ಮೂಡಿನಲ್ಲಿ ಇದ್ದೆ. ತನ್ನ ರಕ್ತದಿಂದ ಯಾರದಾದರೂ ಜೀವ ಉಳಿಯುವದೆಂದರೆ ಯಾರಿಗಾದರೂ ಸಂತೋಷವಾಗುವದು ಸಹಜವೆ. ನನ್ನ ಎನ್. ಸಿ. ಸಿ. ಹಾಗೂ ಪ್ರಥಮೋಪಚಾರ ತರಬೇತಿಗಳಿಂದಾಗಿ ನಾನು ಮಾಡಲಿರುವ ಕೆಲಸದ ಮಹತ್ವದ ಅರಿವು ನನಗಿತ್ತು. ಆದರೆ ಆರ್ಟ್ಸ್ ಪದವೀಧರೆಯಾದ ನನ್ನ ಗೃಹಮಂತ್ರಿ ಶಾಂತಿಗೆ ಇದನ್ನು ತಿಳಿಸಿ ಹೇಳಿ ಮನದಟ್ಟಿಕೆ ಮಾಡಿಕೊಡಲೆತ್ನಿಸಿದಾಗ ನನಗೇ ಯಾರಾದರೂ 'ರಕ್ತದಾನ ಮಾಡಬೇಕಾಗುವಷ್ಟು ಶಕ್ತಿಹ್ರಾಸವಾಯಿತು. ರಕ್ತ ಕೊಟ್ಟರೂ ಶರೀರ ಅದನ್ನು ಪುನಃ ತಯಾರಿಸಿಕೊಳ್ಳುತ್ತದಾದ್ದರಿಂದ ಏನೂ ಚಿಂತಿಸುವ ಕಾರಣವಿಲ್ಲ. ಈ ರೀತಿ ರಕ್ತದಾನ ಮಾಡುವದು ನನ್ನ ಆರೋಗ್ಯಕ್ಕೆ ಬಹಳ ಒಳ್ಳೆಯದು ಎಂದು ಏನೇನೋ ಹೇಳಿ ಸುಸ್ತಾದೆ.

"ಹಾಂಗ ಇದ್ದರೆ ಯಾರಿಗಾದರೂ ರಕ್ತ ಬಂದರ ಡಾಕ್ಟರು ಪಟ್ಟಿ ಯಾಕ ಕಟ್ಟತಾರೆ? ನಿಮಗ ನನ್ನ ಚಿಂತಿ ಇದ್ದರ ಹಾಂವಲ್ಲೊ! ನಿಮಗ ಹಿಂಗ ಯಾರದಾದರೂ ಸೇವಾ ಮಾಡೋ ಮನಸ ಇದ್ದರ ಲಗ್ನ ಯಾಕ ಮಾಡಿಕೊಂಡ್ರಿ?" ಒಂದು ವೇಳೆ ಯಕ್ಷ ಪ್ರತಿ ವರ್ಷ ಧರ್ಮರಾಜನ ಪರೀಕ್ಷೆ ಮಾಡುತ್ತಿದ್ದರೆ ಈ ವರ್ಷ ಇವೇ 'ಮೋಸ್ಟ್ ಲೈಕ್‌ಲೀ ಕೊಶ್ಚನ್ಸ್' ಆಗುತ್ತಿದ್ದವು. ಗಂಗೆ ಯಮುನೆಯರು ಒಂದೊಂದು ಕಣ್ಣಿನಿಂದ ಪ್ರತ್ಯಕ್ಷವಾಗುವ ಸನ್ನಾಹದಲ್ಲಿದ್ದರು. ಒಂದು ನಿಮಿಷ ನನಗೂ ಇನ್ನೊಂದು ವರ್ಷ ತಡೆದು ನಾನು ಮದುವೆಯಾಗಬೇಕಿತ್ತೆಂದು ಅನಿಸಿತು. ಅವಳಿಗೊಂದು ಚಿಕ್ಕ ಲೆಕ್ಚರ್ ಕೊಟ್ಟು ಸಾಯಂಕಾಲ ಅವಳನ್ನು ಬ್ರಿಟಿಶ್ ಕೌನ್ಸಿಲ್ ಲೈಬ್ರರಿಗೆ ಕರೆದೊಯ್ದು ಅಲ್ಲಿ ಯಾವುದೋ ಪುಸ್ತಕದಲ್ಲಿ ರಕ್ತದಾನದ ಬಗ್ಗೆ ಇದ್ದ ಒಂದು ಪ್ರಕರಣವನ್ನು ಓದಲು ಹೇಳಿದೆ. ಕೊನೆಗೆ, ಮರುದಿನ ತನ್ನನ್ನೂ ಜೊತೆಗೆ ಕರೆದುಕೊಂಡು ಹೋಗುವದಾದರೆ ನಾನು ರಕ್ತದಾನ ಮಾಡಲು ಅಭ್ಯಂತರವಿಲ್ಲವೆಂದು ಹೇಳಿದಳು. ಆಗ ಅವಳ ಮುಖ ನೋಡಬೇಕಿತ್ತು. ರಾಣಾ ಪ್ರತಾಪಸಿಂಗನನ್ನು ಯುದ್ಧಕ್ಕೆ ಕಳಿಸುವಾಗ ಅವನ ಹೆಂಡತಿಯ ಮುಖ ಬಹುಶಃ ಹೀಗೇ ಆಗಿರಬಹುದು.

*

ಬೆಳಿಗ್ಗೆ ನಾಲ್ಕೂವರೆಗೆ ಎದ್ದು ಸ್ನಾನಮಾಡಿ ದೇವರ ಫೋಟೋದೆದುರು ದೀಪ ಹಚ್ಚಿಟ್ಟು ಚಹಾ ಮಾಡಿ ಎಬ್ಬಿಸಿದಳು. ಬೆಳಿಗ್ಗೆ ಏಳೂವರೆಗೆ ಇಬ್ಬರೂ ಸ್ಕೂಟರ್ ಏರಿ ಪೆರಂಬೂರ್ ರೇಲ್ವೆ ಆಸ್ಪತ್ರೆಗೆ ಹೊರಟೆವು.

ನಮ್ಮ ಮದುವೆಯಾಗಿ ಎಂಟು ತಿಂಗಳಾಗಿದ್ದರೂ ಅವಳು ಮದ್ರಾಸ್ಸಿಗೆ ಬಂದು ಮೂರು

ತಿಂಗಳೂ ಆಗಿರಲಿಲ್ಲ. ಪೆರಂಬೂರು ಭಾಗವನ್ನು ಅವಳು ನೋಡಿರಲಿಲ್ಲ. ಅದೂ ಇದೂ ಮಾತಾಡುತ್ತ ನನ್ನ ಮದ್ರಾಸಿನ ಭೌಗೋಳಿಕ ಪರಿಜ್ಞಾನವನ್ನು ತೋರಿಸುತ್ತ ಆಸ್ಪತ್ರೆ ಮುಟ್ಟಿದೆ. ಆಸ್ಪತ್ರೆ ಗೇಟಿನಲ್ಲಿ ಸಮಾಜಸೇವಕ ಶಾಮಸುಂದರ ನನ್ನನ್ನು ನಿಲ್ಲಿಸಿ ಕ್ಷಮಿಸಿ, "ಸತ್ಯನಾರಾಯಣ ಕುಲಕರ್ಣಿ ನೀವೇ ತಾನೆ?" ಎಂದು ಕೇಳಿದ. ನಾನು ಹೂಂ ಎಂದು ಸ್ಕೂಟರ್ ಪಾರ್ಕ್ ಮಾಡಿ ಬಂದು ನನ್ನ ಧರ್ಮಪತ್ನಿಯ ಪರಿಚಯ ಮಾಡಿಕೊಟ್ಟೆ. ನಾನು ಇದುವರೆಗೆ ನೋಡಿದ ಎಲ್ಲಾ ಸಿನಿಮಾಗಳ ನಾಯಕಿಯರು ಖಳನಾಯಕನನ್ನು ನೋಡುವ ಹಾಗೆ ಶಾಂತಿ ಅವನನ್ನು ನೋಡಿದಳು. ಸಾರ್ವಜನಿಕ ಸಂಪರ್ಕವನ್ನು ವೃತ್ತಿಯೆಂದು ಆಯ್ದುಕೊಂಡಿದ್ದ ನಾನು ಇನ್ನೆಂದೂ ಇವಳನ್ನು ಇಂಥ ನಾಜೂಕು ಕೆಲಸಕ್ಕೆ ಕರೆದುಕೊಂಡು ಹೋಗಬಾರದೆಂದು ನಿರ್ಧರಿಸಿದೆ.

ಶ್ಯಾಮಸುಂದರ ನನಗೆ ಇನ್ನೂ ಇಬ್ಬರು ಮಧ್ಯವಯಸ್ಸಿನವರ ಪರಿಚಯ ಮಾಡಿಸಿಕೊಟ್ಟ, ಅವರೂ ಅದೇ ರೋಗಿಗೆ ರಕ್ತ ಕೊಡುವುದಕ್ಕೆ ಬಂದಿರುವರೆಂದು ಹೇಳಿದ. ಕಳೆದ ಹತ್ತು ವರ್ಷಗಳಲ್ಲಿ ಅವರಲ್ಲಿ ಒಬ್ಬನು ಆರು ಬಾರಿ, ಇನ್ನೊಬ್ಬನು ಐದು ಬಾರಿ ರಕ್ತದಾನ ಮಾಡಿದ್ದರು. ಶಾಂತಿಗೆ ಈಗ ಸ್ವಲ್ಪ ಖಾತ್ರಿ ಆಯಿತು – ರಕ್ತ ಕೊಟ್ಟವರು ಸಾಯುವುದಿಲ್ಲ ಅಂತ. ನಾನು ಅವಳನ್ನು ಪಕ್ಕಕ್ಕೆ ಕರೆದು, "ಎನೀಮಿಕ್ ಇದ್ದವರ ಮೈಯಲ್ಲಿ ರಕ್ತ ಕಡಿಮೆ ಇರುತ್ತದೆ. (ಹಿಮೋಗ್ಲೊಬಿನ್ ಬಗ್ಗೆ ಅವಳಿಗೆ ವಿವರಿಸುವುದರಲ್ಲಿ ಅರ್ಥವಿರಲಿಲ್ಲ.) ಅಂತಹ ಜನರು ಒಂದು ಬಗೆಯಲ್ಲಿ ಬಿಳಿಚಿಕೊಂಡಿರುವರು. ಇದು ತಿಳಿದು ಬಹುಶಃ ಈ ಇಬ್ಬರೂ ಬೆಳ್ಳಗೆ ಕಾಣಬೇಕೆಂದು ಎಷ್ಟು ರಕ್ತ ಕಳೆದು






ಕೊಂಡರೂ ತಮ್ಮ ಕರಿ ಬಣ್ಣ ಕಳೆದುಕೊಂಡಿಲ್ಲ ನೋಡು. ಇವರ ಮುಂದೆ ನಾನೇ ಫಾರೀನರ್ ಕಂಡಂತೆ ಕಾಣುವೆ' ಎಂದು ಹೇಳಿದೆ. ಶಾಂತಿ ಶಾಂತವಾಗಿ ನಕ್ಕು, "ಥೂ ಹೋಗ್ರಿ, ನಿಮಗಂತೂ ಯಾತರದೂ ಸೀರಿಯಸ್‌ನೆಸ್ಸೇ ಇಲ್ಲ" ಎಂದು ಮೆಲ್ಲನೆ ಗದರಿದಳು.

ಅಷ್ಟರಲ್ಲಿ ನಾವು ರಕ್ತ ಕೊಡಲಿದ್ದ ರೋಗಿಯ ತಂದೆ ಬಂದರು. ಅವರು ಜಮಶೇಡಪುರದಲ್ಲಿ ರೇಲ್ವೆ ನೌಕರರಾಗಿದ್ದರು. ಅವರ ಒಬ್ಬನೇ ಮಗ ಹತ್ತೊಂಬತ್ತು ವರ್ಷದ ಇಕ್‌ಬಾಲ್ ಕೆಲ ವರ್ಷಗಳ ಹಿಂದೆ ಸಂಧಿವಾತ ಜ್ವರದಿಂದ ಬಳಲಿದ. ಅದರಿಂದಾಗಿ ಅವನ ಹೃದಯದಲ್ಲಿಯ ಒಂದು ವಾಲ್ವ್ ಕೆಟ್ಟಿತ್ತಲ್ಲದೆ ಅಲ್ಲಿ ಮೂರು ತೂತುಗಳುಂಟಾಗಿದ್ದವು. Rheumatic fever licks the joints and hits the heart ಎನ್ನುತ್ತಾರೆ. ಈ ಶಸ್ತ್ರಚಿಕಿತ್ಸೆಯ ಮೂಲಕ ಆ ವಾಲ್ವ್ ಬದಲಿಸುವುದಲ್ಲದೆ ತೂತುಗಳನ್ನು ಮುಚ್ಚುವವರಿದ್ದರು. ಮೈ ಜುಂ ಎಂದಿತು. ವಿಜ್ಞಾನದ ವಿಶ್ವರೂಪ ದರ್ಶನವಾದಂತಾಯಿತು. ಅಷ್ಟರಲ್ಲಿ ಇಕ್‌ಬಾಲನನ್ನು ವ್ಹಿಲ್ ಚೇರಿನಲ್ಲಿ ಕೂಡಿಸಿ ಕರೆದುಕೊಂಡು ಬಂದರು. ಮೃತ್ಯುವನ್ನು ಎದುರಿಸಲಿರುವ ಅವನ ಮುಖದಲ್ಲಿ ನೆಲೆಸಿದ್ದ ಶಾಂತಿಯನ್ನು ಕಂಡು ಶಾಂತಿಯ ಮನಸ್ಸಿನ ಶಾಂತಿಯೂ ಆ ಕ್ಷಣಕ್ಕೆ ಕದಡಿ ಹೋಗಿರಬೇಕು.

ರಕ್ತ ಕೊಡಲು ನಾವು ಮೂವರು ಬಂದಿದ್ದರೂ ನನಗೆ ಆ ಕುಟುಂಬದೊಡನೆ ಹೆಚ್ಚಿಗೆ ಸಂಬಂಧ ಬೆಳೆಯಿತು. ಇದಕ್ಕೆ ನನ್ನ ಉರ್ದು ಮಿಶ್ರಿತ ಹಿಂದಿ ಭಾಷೆಯೇ ಕಾರಣ. ಶಾಂತಿ ಕೇಳಿದಳು:

"ಇಷ್ಟೆಂಗ ನಿಮಗ ಹಿಂದೀ ಬರತದ? ನಾನು ಬಿ. ಎ. ಆದಾಗ ಹಿಂದಿ ತೆಗೆದುಕೊಂಡಿದ್ದೆ; ವಿಶಾರದಾ ಆಗೇನಿ; ಅಂದ್ರೂ ಹಿಂಗ ಮಾತಾಡಲಿಕ್ಕೆ ಬರೂದಿಲ್ಲ ಬಿಡ್ರಿ."

"ಅಲ್ಲಿ, ಹುಚ್ಚಿ, ಪರಿಕ್ಷಾ ಪಾಸ್ ಆದ್ರ ಹಿಂದಿ ಬರತದೇನು! ಅದಕ್ಕ ಬಹಳ ಸಿನೇಮಾ ನೋಡಬೇಕು; ವಿವಿಧ ಭಾರತಿ, ಸೀಲೋನ್ ರೇಡಿಯೋ ಕೇಳಬೇಕು" ಅಂತ ಹೇಳಿ ನನ್ನ ಚಟಗಳನ್ನು ಸಮರ್ಥಿಸಿಕೊಂಡೆ. ಇಕ್‌ಬಾಲನೊಂದಿಗೂ ನಾಲ್ಕೈದು ಮಾತನಾಡಿ ಅವನನ್ನು ನಗಿಸಿ ಗುಣವಾದ ನಂತರ ನಮ್ಮ ಜೊತೆಗೆ ಅವನು ಸಿನೆಮಾಕ್ಕೆ ಬರಬೇಕೆಂದು ಹೇಳಿದೆ. ಅವನೊಂದು ಶುಷ್ಕ ನಗೆ ನಕ್ಕ.

ಅಷ್ಟರಲ್ಲಿ ನನ್ನ ರಕ್ತ ಕೊಡುವ ಸರತಿ ಬಂತು. ಓಪನ್ ಹಾರ್ಟ್ ಸರ್ಜರಿಯಂತಹ ಕೆಲ ಶಸ್ತ್ರಚಿಕಿತ್ಸೆಗಳಲ್ಲಿ ರಕ್ತಭಂಡಾರದಲ್ಲಿ ಶೇಖರಿಸಿದ ರಕ್ತ ಉಪಯೋಗವಾಗುವುದಿಲ್ಲವಂತೆ. ಇದಕ್ಕಾಗಿ ಕೇವಲ ಇಪ್ಪತ್ನಾಲ್ಕು ಗಂಟೆ ಮೊದಲು ರಕ್ತ ಶೇಖರಿಸಬೇಕಾಗುವುದೆಂದರು ಡಾಕ್ಟರರು. ಕಾರ್ಯ ಮುಗಿದ ನಂತರ ನನ್ನ ದಾನಿಯ ಕಾರ್ಡಿನಲ್ಲಿ ರಕ್ತ ತೆಗೆದ ದಿನಾಂಕ ಮುಂತಾದ ವಿವರಗಳನ್ನು ಬರೆದುಕೊಟ್ಟರು. ಸ್ವಲ್ಪ ಅಶಕ್ತತೆ ಅನಿಸುತ್ತಿತ್ತು. ಹೊರಗೆ ಬರುವಷ್ಟರಲ್ಲಿ ಇಕ್‌ಬಾಲನ ತಂದೆ ನನಗಾಗಿ ಸೇಬುಹಣ್ಣು, ಬಿಸ್ಕಿತ್ತು, ಹಾಲು ಹಿಡಿದುಕೊಂಡು ನಿಂತಿದ್ದರು. ಅವರ ಒತ್ತಾಯಕ್ಕೆ ಮಣಿದು ಸ್ವಲ್ಪ ಹಾಲು ಕುಡಿದೆ. ಮರುದಿನ ಶಸ್ತ್ರಚಿಕಿತ್ಸೆಯ ನಂತರ ಫೋನು ಮಾಡಿ ನನಗೆ ತಿಳಿಸಬೇಕೆಂದೂ ನಾವಿಬ್ಬರೂ ಮತ್ತೆ ಬಂದು ನೋಡಿಕೊಂಡು ಹೋಗುವೆವೆಂದೂ ಹೇಳಿ ಅಲ್ಲಿಂದ ಹೊರಟೆವು. ಶಾಂತಿಗೆ ಈಗಾಗಲೇ ನನ್ನ ಬಗ್ಗೆ ಹೆಚ್ಚಿನ ಅಭಿಮಾನ ಹುಟ್ಟಿತ್ತು. ನಾನೇನೂ ಅಂಥ ದೊಡ್ಡ ಕೆಲಸ ಮಾಡಿರಲಿಲ್ಲ, ಆದರೆ ದಂಪತಿಯ ಮೇಲೆ ಪುಕ್ಕಟೆ ಇಂಪ್ರೆಶನ್ ಹೊಡೆದಿದ್ದೆ.

ಮರಳಿ ಬರುವಾಗ ನಾನು ಭೆಟ್ಟಿಯಾಗಬೇಕಿದ್ದ ಗಿರಾಕಿಗೆ ಫೋನು ಮಾಡಿ, ಕೆಲಸ ಮುಗಿಸಿ ಮನೆಗೆ ಹೋಗಿ ಮಲಗಬೇಕು, ಸಾಯಂಕಾಲ ಯಾವುದಾದರೂ ಇಂಗ್ಲಿಷ್ ಮೂವೀಗೆ ಅಥವಾ ಶಾಂತಿ ತನ್ನ ವೀಟೊ ಪಾವರ್ ಉಪಯೋಗಿಸಿದರೆ "ದೇಶ ಪರದೇಶ" ನೋಡಬೇಕೆಂದು ಸದ್ಯೋಭವಿಷ್ಯತ್ತಿನ ಯೋಜನೆ ಮಾಡತೊಡಗಿದೆ.

■

ಸಾಯಂಕಾಲ ನಾಲ್ಕು ಗಂಟೆಗೆ ಎದ್ದು ಕಾಫಿ ಕುಡಿಯುತ್ತಿದ್ದಾಗ ನಮ್ಮ ಪಕ್ಕದ ಮನೆಯ

